ಪ್ರಚಾರ ಪುಸ್ತಕ ಮಾಲೆ—೨೩೩

# ಕುಶಲ ಕಲೆಗಳು

ಡಿ. ಗಣೇಶ್




೧೯೮೨

# ಪರಿವಿಡಿ

## ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ "ಸೆನೆಟ್" ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚ ಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸಿದ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನಗಳು ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು

ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನ ವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯ ರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗು ತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವ ವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣ ವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ ಈ ಮಾಲೆಯಲ್ಲಿ ಈಗಾಗಲೆ ಭೌತ ವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯವಿಜ್ಞಾನ, ಗಣಿತ ವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತ ನೂರಮೂರು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗುತ್ತದೆ. ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಡಿ. ಗಣೇಶ್ ಅವರ "ಕುಶಲ ಕಲೆಗಳು" ಹೆಚ್ಚು ಜನಪ್ರಿಯ ವಾಗಲೆಂದು ನಾನು ಆಶಿಸುತ್ತೇನೆ

ಕೆ. ಎಸ್. ಹೆಗ್ಡೆ

ಕುಲಪತಿಗಳು

# ಮೊದಲ ಮಾತು

ಕುಶಲ ಕಲೆಗಳು ಎಂಬ ಈ ಕಿರುಪುಸ್ತಕದಲ್ಲಿ ಪ್ರಸ್ತಾಪಿಸಿರುವ ವಿಚಾರದ ಬಗ್ಗೆ ನಾನು ನನ್ನ ಸ್ವಂತ ಅನುಭವ ಹಾಗು ಪ್ರಯೋಗ ಸಿದ್ಧಿಯ ಫಲಿತಾಂಶಗಳನ್ನುಕುರಿತ ವಿವೇಚನೆ ಇದೆ. ಕರಕುಶಲ ಕಲೆಗಳ ವಿಚಾರವಾಗಿ ನನ್ನಲ್ಲಿ ಅಭಿರುಚಿಯನ್ನೂ ಆಸಕ್ತಿಯನ್ನೂ ಮೂಡಿಸಿದವರು ಮಾದರಿ ಮೈಸೂರು ರಾಜ್ಯದ ಖ್ಯಾತ ಶಿಲ್ಪಿ ಎನಿಸಿದ ದಿವಂಗತ ಸರ್. ಎಂ. ವಿಶ್ವೇಶ್ವರಯ್ಯ ಅವರು. ನನಗೆ ಅನೇಕ ವೇಳೆ ಅವರು ನೀಡುತ್ತಿದ್ದ ಮಾರ್ಗ ದರ್ಶನ, ತೋರುತ್ತಿದ್ದ ಒಲುಮೆ ವಿಶ್ವಾಸಗಳು ನನ್ನನ್ನು ಕಾರ್ಯೋದ್ಯುಕ್ತನನ್ನಾಗಿ ಮಾಡಿವವು. ಅಂತೆಯೇ ನನ್ನ ಹವ್ಯಾಸದ ಆಯಾಮವಿಸ್ತಾರವಾಗತೊಡಗಿತು. ಕರಕುಶಲ ಕಲೆ ಗಳ ಬಗ್ಗೆ ಒಲವೂ ಹೆಚ್ಚಿತು. ತಿಳಿದುಬಂದ ವಿಚಾರ ಹಾಗೂ ಪ್ರಯೋಗದಿಂದ ಸಿದ್ಧಿಸಿದ ಸತ್ಯಾಂಶವನ್ನು ಲೇಖನದ ಮೂಲಕ ಪ್ರಚಾರ ಮಾಡುವುದು ನನ್ನಹವ್ಯಾಸ. ಮೈಸೂರು ವಿಶ್ವವಿದ್ಯಾ ನಿಲಯದ ಪ್ರಸಾರಾಂಗದವರು ಪ್ರಸಾರಮಾಲೆಯ ಯೋಜ ನೆಯ ಅನ್ವಯ ನನ್ನನ್ನು ಕರ್ನಾಟಕ ರಾಜ್ಯದ ವಿವಿಧ ವಿದ್ಯಾ ಸಂಸ್ಥೆಗಳಿಗೆ; ಕಲೆ, ಕರಕುಶಲ ಕಲೆ, ಮಕ್ಕಳ ವಿಜ್ಞಾನ, ಕುಶಲ ಕೈಗಾರಿಕೆ, ಗೃಹಕೈಗಾರಿಕೆ, ಗ್ರಾಮೀಣ ಕೈಗಾರಿಕೆಗಳ ವಿಚಾರ ವಾಗಿ ಉಪನ್ಯಾಸಮಾಡಲು ಕಳುಹಿಸುತ್ತಿದ್ದರು. ಇಂಥ ಉಪ ನ್ಯಾಸಗಳ ಪ್ರಕಟಿತ ರೂಪವೇ ಈ ಕಿರುಪುಸ್ತಕ. ಈ ಪುಸ್ತಕ ದಲ್ಲಿ ಆಯ್ಕೆ ಆಗಿರುವ ಲೇಖನಗಳಿಗೆ ಪ್ರಯೋಗವೇದಿಕೆ ಲಭಿ ಸಿದ್ದು; ಹೊಳಲ್‌ಕೆರೆ ತಾಲ್ಲೂಕು, ಮಲ್ಲಾಡ ಹಳ್ಳಿಯ ಶ್ರೀ ರಾಘವೇಂದ್ರ ನಿಲಯದಲ್ಲಿ ; ರುದ್ರ ಪಟ್ಟಣದ ಪ್ರೌಢಶಾಲೆ ಯಲ್ಲಿ ; ಅರಸೀಕೆರೆಯ ಕಸ್ತೂರಬಾ ನಿಲಯದಲ್ಲಿ ; ಚಿತ್ರ ದುರ್ಗದ ವಿದ್ಯಾ ಶಿಬಿರದಲ್ಲಿ ; ಬಿಳಿಕೆರೆಯ ಪ್ರೌಢಶಾಲೆಯಲ್ಲಿ.

ಪುಸ್ತಕವನ್ನು ಬರೆದು ಕೊಡುವ ಹುಮ್ಮಸ್ಸಿನಿಂದಾಗಿ ಕರಕುಶಲ ಕಲೆಯನ್ನು ಕುರಿತು ಹೆಚ್ಚಿನ ಅಧ್ಯಯನ ಮಾಡಲು ನನಗೆ ಹುಮ್ಮಸ್ಸು ದೊರಕಿದೆ.

ರಾಜ್ಯದ ವಿವಿಧಕ್ಷೇತ್ರಗಳಿಗೆಉಪನ್ಯಾಸ ಮಾಡಲು ಹೋದಾಗಲೆಲ್ಲಾ ಅದಕ್ಕೆಸಂಬಂಧಿಸಿದ ಛಾಯಾ ಚಿತ್ರಗಳನ್ನೂ, ತಯಾರಿಸಿರುವ ವಸ್ತುಗಳನ್ನೂ ಮತ್ತು ಬಣ್ಣದ ಸ್ಲೈಡು ಮುಂತಾದವುಗಳನ್ನು ಭೋದನಾ ವಸ್ತುಗಳ ಮೂಲಕ ಪ್ರದರ್ಶಿಸಿ ಸಭಿಕರಿಗೆ ಆಸಕ್ತಿ ಕೆಡದಂತೆ ಉಪನ್ಯಾಸವು ಕಳೆಕಳೆಯಾಗಿ ಮುಂದುವರಿಯಲು ಸಾಧ್ಯವಾಗುತ್ತಿತ್ತು. ಪ್ರಯೋಗದ ವಿವಿಧ ಬಗೆಯ ಕರಕುಶಲ ಕಲೆಗಳ ವಸ್ತುಗಳನ್ನು ಜೋಡಿಸಿ ಪ್ರದರ್ಶಿಸುವ ಮಾರ್ಗ ಎಲ್ಲರ ಗಮನವನ್ನು ಸೆಳೆಯುತ್ತಿತ್ತು. ಈ ಎಲ್ಲ ಪ್ರಯೋಗದ ಭೋದನಾ ವಸ್ತುಗಳಿಂದ ಉಪನ್ಯಾಸವು ಜೀವಕಳೆಯಿಂದ ತುಂಬಿ ತುಳುಕುತ್ತಿತ್ತು.

ಈ ಕಿರು ಪುಸ್ತಕ ಪ್ರಕಟವಾಗಲು ಕಾರಣರಾದ ಪ್ರಸಾರಾಂಗದ ನಿರ್ದೇಶಕರಾದ ಶ್ರೀಯುತ ಕೆ.ಟಿ. ವೀರಪ್ಪನವರಿಗೂ, ಅಂದವಾಗಿ ಮುದ್ರಿಸಿಕೊಟ್ಟಿರುವ ವಿನ್ಯಾಸ ಪ್ರಿಂಟರ್ಸ್‌ನ ಮಾಲೀಕರಿಗೂ ನನ್ನ ಧನ್ಯವಾದಗಳು.

ದಿನಾಂಕ
22-7-82 ಡಿ. ಗಣೇಶ್

## ನ್ನೂ ಚಿತ್ರ ಬರೆಯಬಹುದು

ಚಿತ್ರಗಳನ್ನು ಬರೆಯುವುದು ಕೆಲವರಿಗೆ ಮಾತ್ರವೇ ಸಾಧ್ಯ
ನ್ನುವುದು ತಪ್ಪು ಭಾವನೆ. ಪ್ರಯತ್ನಿಸಿದರೆ ಪ್ರತಿಯೊಬ್ಬರೂ
ಲಾವಿದರಾಗಬಹುದು. ನಮ್ಮ ಕಲಾವಿದರು ಹಳೆಯ
ದ್ಧತಿಯಂತೆ ಚಿತ್ರವನ್ನು ಬರೆಯುವುದಾಗಲೀ ಅಕ್ಷರಗಳನ್ನು
ೂಪಿಸುವುದಾಗಲೀ ಸುಲಭ ಕೆಲಸವಾಗಿರಲಿಲ್ಲ. ಅವರು
ಪಯೋಗಿಸುತ್ತಿದ್ದ ಸಾಧನವೆಂದರೆ ಕುಂಚ. ಇದರಿಂದ
ತ್ರರೂಪಿಸಲು ನುರಿತ ಕೈಗಳಿಗೆ ಮಾತ್ರ ಸಾಧ್ಯವಿತ್ತು.
ದರೆ ಅನೇಕ ಸುಲಭ ಸಾಧನೋಪಕರಣಗಳು ಈ ಯುಗದಲ್ಲಿ
ಾಣಿಸಿಕೊಂಡಿವೆ. ಈ ರೀತಿಯ ಸುಲಭ ಸಾಧನಗಳನ್ನು
ೂಪಿಸುವುದರಲ್ಲಿ ಮತ್ತು ಬಳಸುವುದರಲ್ಲಿ ಅಮೆರಿಕನ್ನರು
ಿಶಿಷ್ಟರಾಗಿದ್ದಾರೆ. ಇಂಥ ಉಪಕರಣೆಗಳನ್ನು ಉಪಯೋಗಿಸಿ
ೊಂಡು ಪಾಠ ಮಾಡುವ ಮತ್ತು ವಿಷಯವನ್ನು ಸುಲಭವಾಗಿ
ರ್ಥಮಾಡಿಕೊಡುವಂಥ ಸಾಧನಗಳಿಗೆ ಆಡಿಯೋ ವಿಷು
ುಲ್ ಏಡ್ಸ್ ಎನ್ನುತ್ತಾರೆ. ಈ ಸಾಧನಗಳನ್ನು ಅಮೆರಿಕ
ರು ಶಿಶುವಿಹಾರದ ಮಟ್ಟದಿಂದಲೇ ಉಪಯೋಗಿಸಲು
ರಂಭಿಸುತ್ತಾರೆ. ಆದರೆ ಭಾರತದಲ್ಲಿ ಈ ಕ್ರಮ ಇನ್ನೂ
ಷ್ಟು ಬಳಕೆಯಲ್ಲಿಲ್ಲವೆನ್ನಬಹುದು. ಪುರಾತನ ಕಾಲದಿಂದಲೂ
ಮ್ಮಲ್ಲಿ ರೂಢಿಯಲ್ಲಿರುವ ಗೋಡೆಗೆ ನೇತು ಹಾಕಿರುವ ಕಪ್ಪು
ಲಗೆಯ ಮೇಲೆ ಸೀಮೆಸುಣ್ಣದ ಸಹಾಯದಿಂದ ವಿವರಿಸುವ
ದ್ಧತಿ ಈಗಲೂ ಎಲ್ಲೆಡೆಯಲ್ಲಿಯೂ ಇರುವುದು. ಸರಳ ರೀತಿ
ಲ್ಲಿ ನಮಗೆ ಬೇಕಿರುವ ಚಿತ್ರವನ್ನು ರೂಪಿಸುವ ಒಂದು
ಲಭ ಕ್ರಮವನ್ನು ವಿವರಿಸಲಾಗಿದೆ.

## ಆಗತ್ಯ ಸಲಕರಣೆಗಳು

ಇಂಡಿಯನ್ ಇಂಕ್ (ಕರೀಶಾಯಿ) ಲೇಖನಿ, ಇಂಚುಪಟ್ಟಿ, ಗಾಜು 3" × 3", 6" × 6", 10" × 12" ಅಳತೆಯುದು, ಸೀಸದಕಡ್ಡಿ ಮತ್ತು ಡ್ರಾಯಿಂಗ್ ಹಾಳೆ.

## ಪೂರ್ವ ಸಿದ್ಧತೆ

ಕರೀ ಶಾಯಿಯನ್ನು ಬಳಸಿ ಲೇಖನಿಯಿಂದ ಸುಲಭವಾಗಿ ಗಾಜಿನ ಮೇಲೆ ಗೆರೆಗಳನ್ನು ಎಳೆಯಬಹುದು. 3" × 3" ಗಾಜಿನ ಮೇಲೆ 1/8" ಅಂತರದ ಗೆರೆಗಳನ್ನು ಅಡ್ಡಲಾಗಿಯೂ ಮತ್ತು ಉದ್ದಕ್ಕೂ ಎಳೆಯಬೇಕು. ಇದರಿಂದ 1/8" ಚೌಕದ ಮನೆಗಳು ಗಾಜಿನ ಮೇಲೆ ಬರುತ್ತದೆ. ಇದೇ ರೀತಿ 6" × 6" ಗಾಜಿನ ಮೇಲೆ 1/4" ಅಂತರದ ಗೆರೆಗಳನ್ನು ಮತ್ತು 10" × 12" ಗಾಜಿನ ಮೇಲೆ 1/2" ಗೆರೆಗಳನ್ನು ಎಳೆದು ಸಿದ್ಧಪಡಿಸಿಟ್ಟುಕೊಳ್ಳಬೇಕು.

ನಮಗೆ ಬೇಕಾದ ಚಿತ್ರವನ್ನು ಆರಿಸಿಕೊಂಡ ಮೇಲೆ ಚಿತ್ರ 2 ಆ ಚಿತ್ರದ ಅಳತೆಗೆ ಬೇಕಿರುವ ಗೆರೆಗಳುಳ್ಳ ಗಾಜನ್ನು ಚಿತ್ರದ ಮೇಲೆ ಇರಿಸಬೇಕು. ಚಿತ್ರವು ಗೆರೆಗಳಿಗೆ ಸರಿ ಹೊಂದುವಂತೆ ಅಳವಡಿಸಿಕೊಳ್ಳಬೇಕು. ಈ ರೀತಿ ಬಂಧನದಲ್ಲಿರುವ ಚಿತ್ರವನ್ನು ಯಾವ ಅಳತೆಗೆ ವಿಸ್ತರಿಸಬೇಕೋ ಅಥವಾ ಕುಗ್ಗಿಸಬೇಕೋ ಆ ಅಳತೆಗೆ ಡ್ರಾಯಿಂಗ್ ಹಾಳೆಯ ಮೇಲೆ ಗೆರೆಗಳನ್ನು ಎಳೆದುಕೊಳ್ಳಬೇಕು. ಉದಾಹರಣೆಗೆ ನಾವು ಉಪಯೋಗಿಸುವ ಗಾಜು 1/2" ಅಳತೆಗೆ ಇದ್ದರೆ ಚಿತ್ರವನ್ನು 2 ಸಲ ಹೆಚ್ಚಿಸಲು 1" ಅಂತರದ ಗೆರೆಗಳನ್ನು ಹಾಳೆಯ ಮೇಲೆ ಎಳೆಯಬೇಕು. ಅಥವಾ ಪುಸ್ತಕದಲ್ಲಿರುವ ಚಿತ್ರವನ್ನು

...'2" ಭಾಗಕ್ಕೆ ಇಳಿಸಬೇಕಾದಾಗ, ಹಾಳೆಯ ಮೇಲೆ 1/4"
...ತರದ ಗೆರೆಗಳನ್ನು ಎಳೆದರೆ ಬೇಕಿರುವ ಅಳತೆಗೆ ಚಿತ್ರವನ್ನು
...ರೆಯುಬಹುದು.

ಇಷ್ಟೆಲ್ಲಾ ಸಿದ್ಧವಾದ ಮೇಲೆ ಹಾಳೆಯ ಮೇಲೆ ಚಿತ್ರವನ್ನು
...ತಿಯೊಂದು ಚೌಕದಲ್ಲಿ ಇರುವ ರೇಖೆಗೆ ಅನುಗುಣವಾಗಿ
...ರೆಯುತ್ತಾ ಹೋಗಬೇಕು. ಎಲ್ಲಾ ಚೌಕಗಳೂ ರೇಖೆ
...ಳಿಂದ ಪೂರ್ತಿಯಾದ ಮೇಲೆ ಹಾಳೆಯ ಮೇಲೆ ಎಳೆದಿರುವ
...ಗಳನ್ನು ರಬ್ಬರಿನಿಂದ ಅಳಿಸಬೇಕು. ಬರೆದಿರುವ ಚಿತ್ರ
...ನ್ನು ಅಳತೆ ಮಾಡಿ ನೋಡಿದರೆ ನಾವು ರೂಪಿಸಿರುವ ಚಿತ್ರವು
...ತೆಗೆ ಸರಿಯಾಗಿರುತ್ತದೆ.

ಬೇಕಿರುವ ಚಿತ್ರಗಳ ಪ್ರತಿ ಚಿತ್ರ ತಯಾರಿಸಲು ಇದೊಂದು
...ಲಭ ಸಾಧನ. ಇದರಿಂದ ಪುಸ್ತಕದ ಮೇಲೆ ಗೆರೆಗಳನ್ನು
...ರೆಯಬೇಕಿಲ್ಲ. ಬೇಕಿರುವ ಚಿತ್ರಗಳ ಮೇಲೆ ಈ ಗೆರೆಗಳುಳ್ಳ
...ಕದ ಗಾಜನ್ನು ಇರಿಸಿದರೆ ಸಾಕು ಚಿತ್ರ ಬರೆಯಲು
...ಪ್ರಾರಂಭಿಸಬಹುದು. ಇದು ಅಂಥ ದುಬಾರಿ ಬೆಲೆಯ ಸಾಧನ
...ನೂ ಅಲ್ಲ. ನೀವು ಒಂದು ಬಾರಿ ಪ್ರಯತ್ನಿಸಿ ನೋಡಿ.

## ಆಧುನಿಕ ಚಿತ್ರಕಲೆಯಲ್ಲಿ ನವ್ಯ ಪ್ರಯೋಗ
## ತೈಲ ಚಿತ್ರಗಳ ತಯಾರಿಕೆ

ಕರ್ನಾಟಕ ಮೊದಲಿನಿಂದಲೂ ತನ್ನ ಸುಂದರ ಚಿತ್ರ
ಕಲೆಗೆ ಜಗತ್ಪ್ರಸಿದ್ಧವಾಗಿದೆ. ಸುಂದರ ವರ್ಣರಂಜಿತ ತೈಲ ಚಿತ್ರ
ಗಳು ದಂತದ ಮತ್ತು ಗಂಧದ ಮರಗಳ ಸೂಕ್ಷ್ಮ ಕೆತ್ತನೆ
ಕೆಲಸಗಳು ಮತ್ತಿತರ ಕಲೆಗಳಿಗೆ ಈ ನಾಡು ಬೀಡಾಗಿದೆ. ಆಧು
ನಿಕ ಕಲೆ ನಮ್ಮ ಪ್ರಾಚೀನ ಚಿತ್ರಕಲೆಯ ಮೇಲೆ ಇಂದು ಮಹ
ತ್ಪರಿಣಾಮ ಬೀರಿದೆ ಜಲವರ್ಣಗಳಿಂದ ಮನೋಹರ ಚಿತ್ರಗಳ
ತಯಾರಿಕೆ ಕುಂಚಗಳ ಸಹಾಯದಿಂದ ಹಲವು ವರ್ಣಗಳ
ಸಂಯೋಜನೆ ನಡೆಸಿ ಅರ್ಥಗರ್ಭಿತ ಚಿತ್ರಗಳನ್ನು ಬರೆಯುವಿಕೆ
ಮತ್ತು ಇನ್ನೂ ಅನೇಕ ವಿಧಾನಗಳು ನಮ್ಮ ಸಾಂಪ್ರದಾಯಕ
ಚಿತ್ರಕಲೆಯನ್ನು ಪ್ರವೇಶಿಸಿದೆ.

ವರ್ಣರಂಜಿತ ತೈಲ ಚಿತ್ರಗಳನ್ನು ತಯಾರಿಸುವಿಕೆಯಲ್ಲಿ
ಇತ್ತೀಚಿಗೆ ಅನೇಕ ಪ್ರಯೋಗಗಳನ್ನು ನಡೆಸಲಾಗಿದೆ. ಪುಸ್ತಕ
ಗಳ ಸುಂದರ ಆಕರ್ಷಕ ರಕ್ಷಾಕವಚಗಳು ಮದುವೆಗಳ ಕರೆಯೋ
ಲೆಗಳು, ಶುಭಾಶಯಗಳನ್ನು ಕೋರುವ ಪತ್ರಗಳ ಹೊರಪುಟ
ಗಳು, ಛಾಯಾಚಿತ್ರದ ಆಲ್ಬಂ, ಮುಂತಾದುವನ್ನೆಲ್ಲಾ
ಬಹು ಸುಂದರವಾಗಿ ಕೆಲವೊಂದು ಬಗೆಯ ಅಪೂರ್ವಸಂಯೋಜ
ನೆಯಿಂದ ತಯಾರಿಸಿಕೊಳ್ಳಬಹುದು.

ಒಂದು ಅಗಲವಾದ ತಟ್ಟೆಯನ್ನು ತೆಗೆದುಕೊಂಡು. ತಟ್ಟೆ
ಯಲ್ಲಿ ಸ್ವಲ್ಪ ನೀರು ಹಾಕಬೇಕು. ನಂತರ ಚಿತ್ರಗಳನ್ನು ಮೂಡಿ
ಸಬೇಕಾದ ಕಾಗದಗಳನ್ನು ತೆಗೆದಿಟ್ಟುಕೊಂಡು ಸ್ವಲ್ಪ ಕರ್ಪೂರ
ತೈಲವನ್ನು ನೀರಿನ ಮೇಲೆ ಸಿಂಪಡಿಸಬೇಕು. ಅನಂತರ ನವಾ

ಯಾವ ಯಾವ ವರ್ಣಗಳ ಸಂಯೋಜನೆ ಹಿಡಿಸುತ್ತದೆಯೋ
ಅದನ್ನು ಕಡ್ಡಿಗಳ ಸಹಾಯದಿಂದ ಸ್ವಲ್ಪ ಸ್ವಲ್ಪವಾಗಿ ತೆಗೆದು
ತುಮುಕಿಸಬೇಕು. ನೀರಿಗೆ ತೈಲ ಬಣ್ಣ ಬಿದ್ದಕೂಡಲೇ
ಅದು ಗೊತ್ತಾದ ರೀತಿಯಲ್ಲಿ ಹರಡುತ್ತಾ ಹೋಗುತ್ತದೆ. ಬೇರೆ
ಬೇರೆ ಆಕರ್ಷಕ ಬಣ್ಣಗಳನ್ನು ಒಳ್ಳೆಯ ಪ್ರಮಾಣದಲ್ಲಿ ಈ ರೀತಿ
ಸೇರಿಸಿ ಅನಂತರ ಕಾಗದದ ಹಾಳೆಗಳನ್ನು ನೀರಿನ ಮೇಲೆ ಅದ್ದಿ
ಬೇಗನೆ ಹೊರತೆಗೆದರೆ ವರ್ಣಚಿತ್ರಗಳು ಹಾಳೆಗಳ ಮೇಲೆ ಸ್ಪಷ್ಟ
ವಾಗಿ ಮೂಡಿರುತ್ತದೆ. ಈ ಕಾರ್ಯಕ್ಕೆ ತಗಲುವ ಖರ್ಚು
ಅತ್ಯಲ್ಪ.

ಆದರೆ ಇವರಿಂದ ಮಹದುಪಯೋಗವಾಗುವುದರಲ್ಲಿ ಯಾವ
ಸಂದೇಹವೂ ಇಲ್ಲ. ಸುಂದರ ರಕ್ಷಾ ಪುಟಗಳು ಹೊರ ಕವಚ
ಗಳು, ಆಕರ್ಷಕ ಕರೆಯೋಲೆಗಳು ಮುಂತಾದವನ್ನೆಲ್ಲಾ ನಮ್ಮ
ಮನ ಮೆಚ್ಚುವಂತೆ ಮನೆಯಲ್ಲೇ ಸಿದ್ಧಪಡಿಸಿಕೊಳ್ಳಬಹುದು.

ಡಬ್ಬಿಗಳಲ್ಲಿ ಬರುವ ತೈಲ ವರ್ಣಗಳು ಕೆಂಪು, ಹಳದಿ, ನೀಲಿ
ಮತ್ತು ಟರ್‌ಪೈನ್‌ಟೈ ತೈಲ (ಕರ್‍ಪೂರದ ತೈಲ). ಈ ಕಲೆ
ಯನ್ನು ಕಾಗದ ಹಾಗೂ ಬಟ್ಟೆಗಳ ಮೇಲೆ ವರ್ಣರಂಜಿತ
ಅಮೃತ ಶಿಲಾಕೃತಿಗಳ ಮುದ್ರಣವನ್ನು ಪಡೆಯಬಹುದು.

## ಕೊರೆಯಚ್ಚು ಮುದ್ರಣ

ಕೊರೆಯಚ್ಚಿನ (ಸ್ಟೆನ್‌ಸಿಲ್) ಮುದ್ರಣ ಕಲೆ ಸಾಕಷ
ಪ್ರಾಚೀನವಾದದ್ದು. ಜನ ತಮಗೆ ಬೇಕಿರುವ ಅಕ್ಷರಗ
ಹಾಗೂ ವಿನ್ಯಾಸಗಳ ಪ್ರತಿಗಳನ್ನು ಕೊರೆಯಚ್ಚು ವಿಧಾನ
ಮೂಲಕ ಪಡೆಯುತ್ತಿದ್ದರು. ಗಟ್ಟಿಯಾದ ಇಲ್ಲವೆ ತೆಳುವಾ
ಎಣ್ಣೆ ಹಾಳೆಗಳನ್ನು ಬಳಸಿ ಅವರು ಕೊರೆಯಚ್ಚನ್ನು ಸಿದ್ಧಪ
ಸುತ್ತಿದ್ದರು.

ಕೊರೆಯಚ್ಚು ಮುದ್ರಣ ಮೊಟ್ಟಮೊದಲು ಆರಂ
ವಾದುದು ಬಹುಶಃ ಈಜಿಪ್ಟಿನಲ್ಲಿ, ಬಳಿಕ ಚೀನ, ಜಪಾನ
ಹಾಗೂ ಫ್ಯೂಜಿಗಳಲ್ಲಿ. 17-18ನೆಯ ಶತಮಾನದ ವೇಳ
ಇಂಗ್ಲೆಂಡ್ ಹಾಗೂ ಫ್ರಾನ್ಸ್ ದೇಶದಲ್ಲಿ ಪತ್ರಿಕೆಗಳ ಮುದ
ಣಕ್ಕೆ ಕೊರೆಯಚ್ಚಿನ ವಿಧಾನ ಬಳಸುತ್ತಿದ್ದರು. 1870
ವೇಳೆಗೆ ಯುರೋಪಿನಲ್ಲೆಲ್ಲಾ ವ್ಯಾಪಕವಾಗಿ ಬಳಕೆಗೆ ಬಂದ
ವಿಧಾನ 1907ರ ವರೆವಿಗೂ ರೂಢಿಯಲ್ಲಿತ್ತು.

## ಹಲವು ವಿಧಾನಗಳು

ಸ್ಯಾಮುಯೆಲ್ ಸೈಮನ್ ಎಂಬಾತ 1907ರಲ್ಲಿ ರೇಶ
ಬಟ್ಟೆಯನ್ನು ಉಪಯೋಗಿಸಿಕೊಂಡು ಸರಳ ಬಗೆಯ ವಿನ್ಯಾ
ಗಳನ್ನು ಹಾಗೂ ಚಿಕ್ಕ ಅಕ್ಷರಗಳನ್ನು ಮುದ್ರಿಸಿ ತೋರಿಸಿದ
ಒರಟು ಕುಂಚಗಳ ಸಹಾಯದಿಂದ ಈತ ಮುದ್ರಣಕ್ಕೆ ಬೇಕ
ಗುವ ಅಚ್ಚನ್ನು ತೆಗೆಯುತ್ತಿದ್ದ. ಮುಂದೆ ಅಮೆರಿಕಾ
ಸಾನ್‌ಫ್ರಾನ್ಸಿಸ್ಕೋದ ಕಲಾವಿದ ಜಾನ್ ಪಿಲನ್‌ವತ್
ಒಂದೇ ತೆರೆಯಲ್ಲಿ ಅನೇಕ ಬಣ್ಣಗಳನ್ನಳವಡಿಸಿ ವಿನ್ಯಾ
ಗಳನ್ನು ಮುದ್ರಿಸುವ ವಿಧಾನವನ್ನು ಕಂಡುಹಿಡಿದ. ಇದಕ

ಏಕ ತೆರೆ ಅಥವಾ ವಿಸರ್ಜಿಸುವ ವಿಧಾನ ಎಂದು ಹೆಸರಾಯಿತು. ಈ ವಿಧಾನ ಹೆಚ್ಚು ಕ್ಲಿಷ್ಟವಾಗಿದ್ದುದರಿಂದ ವ್ಯಾಪಕವಾಗಿ ಬಳಕೆಗೆ ಬರಲಿಲ್ಲ.

ಅಂತೋನಿ ವೆಲಾವಿನ್ ಎಂಬುವನು 1938ರಲ್ಲಿ ಹಲವು ಪ್ರಯೋಗಗಳನ್ನು ಮಾಡಿ, ಮುದ್ರಣಕ್ಕೆ ಅಗತ್ಯವಾದ ಹೊಸದೊಂದು ರಾಸಾಯನಿಕ ಮಾಧ್ಯಮವನ್ನು ಕಂಡುಹಿಡಿದ. 1940ರ ವೇಳೆಗೆ ರೇಶ್ಮೆ ಬಟ್ಟೆಯನ್ನು ತೆರೆಯಾಗಿ ಬಳಸಿಕೊಂಡು ಈ ರಾಸಾಯನಿಕದ ಸಹಾಯದಿಂದ ಮುದ್ರಿಸುವ ಕಲೆ ಆರಂಭವಾಯಿತು. ಈ ವಿಧಾನವೇ ಮುಂದೆ ರೇಶ್ಮೆ ತೆರೆ ಮುದ್ರಣ (Silk Screen point) ಎಂದು ಖ್ಯಾತಿ ಪಡೆಯಿತು. 1951ರಲ್ಲಿ ಜರ್ಮನಿಯ ವಿಕ್ಟರ್‌ಸ್ಟ್ರೆಸನ್ ಎಂಬಾತ ಮತ್ತೊಂದು ಹೊಸ ಬಗೆಯ ಮುದ್ರಣ ವಿಧಾನ ಕಂಡುಹಿಡಿದ. ಡುರ್ಶ್‌ಡುಕ್ ಅಥವಾ ಸೆರಿಗ್ರಫಿ ಎಂದು ಈ ವಿಧಾನಕ್ಕೆ ಹೆಸರು ಬಂತು. ಆಲ್‌ಬರ್ಟ್ ಕಾಸ್‌ಲಾಪ್ ಎಂಬ ಇನ್ನೊಬ್ಬ ತಜ್ಞ ಈ ವಿಧಾನಕ್ಕೆ 'ಮಿಟೋಗ್ರಫಿ' ಎಂದು ಇನ್ನೊಂದು ನಾಮಕರಣ ಮಾಡಿದ. ಈ ವಿಧಾನದಲ್ಲಿ ಬೇಕಾದ ಅಕ್ಷರಗಳನ್ನಾಗಲಿ ವಿನ್ಯಾಸವನ್ನಾಗಲಿ ಯಾವುದಾದರೊಂದು ಹಾಳೆಯ ಮೇಲೆ ಬರೆದು, ಅದರ ಆಕಾರಕ್ಕೆ ತಕ್ಕಂತೆ ಕತ್ತರಿಸಿಕೊಳ್ಳುತ್ತಿದ್ದರು. ಬಳಿಕ ಸೂಕ್ತ ಅಳತೆಯ ಚೌಕಟ್ಟಿಗೆ ಬಿಗಿದ ಬಟ್ಟೆಯ ಮೇಲೆ ಇದನ್ನು ಅಂಟಿಸಿ ಸಿದ್ಧಪಡಿಸುತ್ತಿದ್ದರು. ಬಳಿಕ ಅಪೇಕ್ಷಿತ ಕಾಗದದ ಮೇಲೆ ಹೀಗೆ ಸಿದ್ಧಪಡಿಸಿದ ಬಟ್ಟೆಯನ್ನು ಹಾಸಿ, ಮುದ್ರಣ ತೆಗೆಯುತ್ತಿದ್ದರು. ಈ ಬಗೆಯ ಮುದ್ರಣವನ್ನು ಪುಸ್ತಕದ ಹೊದಿಕೆಗಳಿಗೆ ಬಳಸುತ್ತಿದ್ದರು.

## ತೆರೆಮುದ್ರಣ ಸರಳ, ಸುಲಭ

ಮೇಲೆ ವಿವರಿಸಿದ ವಿಧಾನಗಳು ಅಷ್ಟಿಷ್ಟು ಪರಿಷ್ಕಾರಗಳೊಡನೆ ಈಗಲೂ ಬಳಕೆಯಲ್ಲಿವೆ. ಆದರೂ ಸರಳವಲ್ಲದ ಹೆಚ್ಚು ವೇಳೆ ತೆಗೆದುಕೊಳ್ಳುವ ಈ ವಿಧಾನಗಳಿಗಿಂತ ಹೆಚ್ಚು ಸಮರ್ಪಕವಾದ ವಿಧಾನವೊಂದು ಈಗೀಗ ಬಳಕೆಗೆ ಬರುತ್ತಿದೆ. ಈ ವಿಧಾನಕ್ಕೆ 'ತೆರೆ ಮುದ್ರಣ' ವೆಂದು ಹೆಸರು. ಈ ವಿಧಾನವನ್ನು ಅನುಸರಿಸಿ, ಪಿಂಗಾಣಿ ಸಾಮಾನು, ಪೆಟ್ಟಿಗೆ, ಕರೆಯೋಲೆ, ಪುಸ್ತಕಗಳ ಕವಚ, ಭೂ ರೇಖಾ ಚಿತ್ರ, ಗಾಜಿನ ಸಾಮಾನು, ಪೋಸ್ಟರು, ಟ್ರಾನ್ಸಿಸ್ಟರ್, ರೇಡಿಯೋ, ಹೀಗೆ ಅನೇಕ ರೀತಿಯ ವಸ್ತುಗಳ ಮೇಲೆ ಬೇಕೆನಿಸಿದ ವಿನ್ಯಾಸಗಳನ್ನು, ಅಕ್ಷರಗಳನ್ನು ಮುದ್ರಿಸಬಹುದು. ಬರಿಯ ಕೈಗಾರಿಕಾ ಕ್ಷೇತ್ರದಲ್ಲಿ ಮಾತ್ರವಲ್ಲದೆ ಗೃಹಾಲಂಕಾರದಲ್ಲೂ ಇದರ ಉಪಯೋಗವಿದೆ.

### ತೆರೆ ಮುದ್ರಣ ವಿಧಾನದಲ್ಲಿ ಐದು ಮುಖ್ಯ ವಿಧಾನಗಳಿವೆ

1. ವಿಷಮ ಪ್ರತಿಯನ್ನು ಸಿದ್ಧಪಡಿಸುವುದು.
2. ರೇಶ್ಮೆ ನೈಲಾನ್ ಅಥವಾ ಆರ್ಗಂಡಿ ಬಟ್ಟೆಯನ್ನು ಮರದ ಚೌಕಟ್ಟಿಗೆ ಅಳವಡಿಸಿ ಬಿಗಿಯುವುದು.
3. ಚೌಕಟ್ಟಿಗೆ ಅಳವಡಿಸಿದ ಬಟ್ಟೆಯನ್ನು ರಾಸಾಯನಿಕ ಮಾಧ್ಯಮದಿಂದ ಸೂಕ್ಷ್ಮವೇದಿಯಾಗಿಸುವುದು.
4. ತೆರೆಯನ್ನು (ಮೇಲೆ ಹೇಳಿದ ರೀತಿ ಸೂಕ್ಷ್ಮ ವೇದಿಯಾದ ಬಟ್ಟೆ) ವಿಷಮ ಪ್ರತಿಯ ಸಹಾಯದಿಂದ ಪಡಿಯಚ್ಚನ್ನಾಗಿ ಪರಿವರ್ತಿಸುವುದು.

5. ಪಡಿಯಚ್ಚನ್ನು ತೆಗೆಯಿಂದ ಪ್ರತಿಗಳನ್ನು ಮುದ್ರಿಸುವುದು.

## 1. ವಿಷಮ ಪ್ರತಿ ಸಿದ್ಧಪಡಿಸುವುದು

ಕ್ಯಾಮರಾದ ಸಹಾಯದಿಂದ ಬೇಕಾದ ರೇಖಾ ಚಿತ್ರದ ವಿಷಮ ಪ್ರತಿಯನ್ನು ಮಾಡಿಕೊಳ್ಳಬೇಕು. ವಿಷಮ ಪ್ರತಿ ಚಿಕ್ಕದಾಗಿದ್ದರೆ ವಿಸ್ತಾರಕದ ನೆರವಿನಿಂದ ಬೇಕಾದ ಅಳತೆಗೆ ದೊಡ್ಡದು ಮಾಡಿಕೊಳ್ಳಬಹುದು. ವಿಷಮ ಪ್ರತಿಯನ್ನು 'ಕೊಪೆಕ್ಸ್' ಸೂಕ್ಷ್ಮವೇದಿ ಫಿಲ್ಮ್‌ನಿಂದ ಪಡೆಯಬೇಕು. (ವಿಷಮ ಪ್ರತಿಯಿಂದ ಸಿದ್ಧಪಡಿಸುವುದಾದರೆ ಛಾಯಾಗ್ರಾಹಕನ ನೆರವು ಬೇಕಾಗುವುದು) ರೇಖಾ ಚಿತ್ರವನ್ನು ಸಿದ್ಧಪಡಿಸುವ ಇನ್ನೊಂದು ಸುಲಭ ವಿಧಾನವೂ ಇದೆ. ತೆಳುವಾದ ಗಾಜಿನ ಹಾಳೆಯೊಂದನ್ನು ರೇಖಾ ಚಿತ್ರದ ಮೇಲಿಟ್ಟು ಇಂಡಿಯನ್ ಇಂಕ್ (ಮಸಿ) ಬಳಸಿ ಚಿತ್ರವನ್ನು ನಕಲು ಮಾಡಿಕೊಳ್ಳುವುದೇ ಈ ವಿಧಾನ. ಗಾಜಿನ ಹಾಳೆಯ ಬದಲು ಪಾಲಿಥೀನ್ ಹಾಳೆಯನ್ನು ಬೇಕಾದರೂ ಬಳಸಬಹುದು.

## 2. ಮರದ ಚೌಕಟ್ಟಿಗೆ ಬಟ್ಟೆ ಅಳವಡಿಸಬಹುದು

ಈ ಕೆಲಸಕ್ಕೆ ಸಂಸ್ಕರಿಸಿದ ಮರದ ಚೌಕಟ್ಟನ್ನು ಉಪಯೋಗಿಸುವುದು ಉತ್ತಮ. ಚೌಕಟ್ಟಿನ ಉದ್ದ ಮತ್ತು ಅಗಲಗಳು ರೇಖಾ ಚಿತ್ರದ ಅಳತೆಗಿಂತ ಸುಮಾರು 1½ ಅಂಗುಲ ಹೆಚ್ಚು ದೊಡ್ಡದಿರಬೇಕು. ಬಟ್ಟೆಯನ್ನು ಚೌಕಟ್ಟಿಗೆ ಅಳವಡಿಸಲು ಮೊಳೆಗಳನ್ನು ಉಪಯೋಗಿಸಬಹುದು. ಆದರೆ ಹೀಗೆ ಮಾಡುವಾಗ ಬಟ್ಟೆ ಹಾಳಾಗುವ ಸಂಭವವಿರುವುದರಿಂದ ಗಟ್ಟಿದಾರ ಬಳಸಿ, ಮುಂದೆ ಹೇಳಿರುವ ರೀತಿಯಲ್ಲಿ ಮಾಡುವುದು ಒಳ್ಳೆ

ಯದು. ಚೌಕಟ್ಟಿನ ಪಟ್ಟಿಯ ಮೇಲೆ ಸೂಕ್ತ ಗಾತ್ರದ
ತೋಡನ್ನು ಕೊರೆದು ಕೊಂಡು ತೋಡಿಗೆ ಸರಿ ಹೋಗುವ
ದಪ್ಪದಾರ ಸಿಕ್ಕಿಸುತ್ತಾ, ಬಟ್ಟೆಯನ್ನು ಬಿಗಿಯಬೇಕು.

3. ಚೌಕಟ್ಟಿಗೆ ಅಳವಡಿಸಿದ ಬಟ್ಟೆಯನ್ನು ಸೂಕ್ಷ್ಮ
ವೇದಿಯಾಗಿಸುವುದು

ಸೂಕ್ಷ್ಮವಾಗಿ ತಯಾರಿಸಿದ ರಾಸಾಯನಿಕ ಮಾಧ್ಯಮದಿಂದ
ಬಟ್ಟೆಯನ್ನು ಸೂಕ್ಷ್ಮವೇದಿ ಮಾಡಿಕೊಳ್ಳಬೇಕು. ಈ ರಾಸಾ
ಯನಿಕವನ್ನು ತಯಾರಿಸಲು ಜಿಲಾಟಿನ್, ಸೋಡಿಯಂ
ಕಾರ್ಬೋನೇಟ್, ಪೊಟ್ಯಾಸಿಯಂ. ಬೈಕ್ರೊಮೇಟ್ ಮತ್ತು
ಗ್ಲಿಸರಿನ್‌ಗಳು ಅಗತ್ಯ ಒಂದು ಲೀಟರ್ ದ್ರಾವಣಕ್ಕೆ ಬೇಕಾ
ಗುವ ವಸ್ತುಗಳ ಪ್ರಮಾಣ ಈ ರೀತಿ ಇದೆ.

ನೀರು—1 ಲೀಟರ್
ಜಿಲಾಟಿನ್—90 ಗ್ರಾಂ
ಸೋಡಿಯಂ ಕಾರ್ಬೋನೇಟ್—2ಗ್ರಾಂ
ಪೊಟ್ಯಾಸಿಯಂ ಬೈಕ್ರೊಮೇಟ್—20ಗ್ರಾಂ
ಗ್ಲಿಸರಿನ್—7 ಮಿ.ಲಿ

ಜಿಲಾಟಿನ್ ಪುಡಿಯನ್ನು 1 ಲೀಟರ್ ನೀರಿನಲ್ಲಿ ಒಂದು
ಗಂಟೆಯ ಕಾಲ ನೆನೆಸಿಡಿ. ಅನಂತರ ಮಂದಾಗ್ನಿಯಲ್ಲಿ ಕಾಯಿ
ಸುತ್ತಾ ಜಿಲಾಟಿನನ್ನು ನಿಧಾನವಾಗಿ ಕರಗಿಸಿ. ಆಮೇಲೆ ಬಿ
ಯಿರುವಾಗಲೇ ಸೋಡಿಯಂ ಕಾರ್ಬೋನೇಟ್ ಮತ್ತು ಪೊಟ್ಯಾ
ಸಿಯಂ ಬೈಕ್ರೊಮೇಟ್‌ಗಳನ್ನು ಇದಕ್ಕೆ ಸೇರಿಸಬೇಕು. ಎಲ್ಲವು
ಚೆನ್ನಾಗಿ ಸೇರುವಂತೆ ಕಲಿಸಬೇಕು. ಈ ಮಿಶ್ರಣಕ್ಕೆ ಗ್ಲಿಸರಿನ್
ಸೇರಿಸಬೇಕು. ಗ್ಲಿಸರಿನ್ ಸೇರಿಸುವಾಗ ಕತ್ತಲೆ ಇರುವುದ

ಒಣಗಿಸಿಡುವುದು. (ಕೆಂಪು ಇಲ್ಲವೆ ಹಳದಿ ದೀಪವಿರಬಹುದು).

ಚೌಕಟ್ಟಿಗೆ ಬಂಧಿಸಿದ ಬಟ್ಟೆಯ ಮೇಲೆ ಈ ದ್ರಾವಣವನ್ನು ಕತ್ತಲೆಯಲ್ಲಿ ಕುಂಚದ ಸಹಾಯದಿಂದ ಒಂದೇ ಸಮ ಹರಡು ವಂತೆ ಬಳಿಯಬೇಕು. ದ್ರಾವಣವನ್ನು ಬಟ್ಟೆಯ ಎರಡೂ ಬದಿ ಗಳಲ್ಲೂ ಬಳಿಯ ಬೇಕಲ್ಲದೆ, ಬಳಿಯುವಾಗ ದ್ರಾವಣ ಬಿಸಿ ಯಾಗಿರಬೇಕು. ದ್ರಾವಣ ತಣ್ಣಗಾದರೆ ಗಟ್ಟಿಯಾಗುವುದರಿಂದ ಬಳಿಯುವುದು ಕಷ್ಟವಾಗುವುದು. ಬಳಿಕ ಇದನ್ನು ಒಂದೆರಡು ಗಂಟೆಗಳ ಕಾಲ ಕತ್ತಲೆಯಲ್ಲೇ ಆರಲು ಬಿಡಬೇಕು. ಈಗ ಬಟ್ಟೆ ಸೂಕ್ಷ್ಮ ವೇದಿಯಾಗಿದ್ದು ತೆರೆಯೆನ್ನಿಸಿಕೊಳ್ಳುತ್ತದೆ

## 4. ತೆರೆಯನ್ನು ಪಡಿಯಚ್ಚನ್ನಾಗಿ ಪರಿವರ್ತಿಸುವುದು.

ಸೂಕ್ಷ್ಮವೇದಿಯಾಗಿರುವ ತೆರೆಯ ಮೇಲೆ ವಿನ್ಯಾಸವುಳ್ಳ ವಿಷಮ ಪ್ರತಿ ಇಲ್ಲವೆ ಗಾಜಿನ ಅಥವಾ ಪಾಲಿಥೀನ್ ಹಾಳೆಯ ನ್ನಿಟ್ಟು ಇವುಗಳ ಮೇಲೆ ಭಾರಕ್ಕೆಂದು ಗಾಜಿನ ಹಾಳೆಯನ್ನು ಇಟ್ಟು ಬಿಸಿಲಿಗೆ ಒಡ್ಡಿ 5 ನಿಮಿಷ ಇಡಬೇಕು (ಬಿಸಿಲಿನ ಪ್ರಕಾಶಕ್ಕೆ-5 ನಿಮಿಷ, ನೆರಳಿಗೆ-30 ನಿಮಿಷ). ಬಳಿಕ ವಿಷಮ ಪ್ರತಿಯನ್ನು ತೆಗೆದಿರಿಸಿ ತೆರೆಯನ್ನು ನೀರಿನಿಂದ ತೊಳೆಯ ಬೇಕು. ಬೆಳಕು ಬಿದ್ದ ಜಾಗದಲ್ಲಿನ ರಾಸಾಯನಿಕ ಗಟ್ಟಿ ಯಾಗಿ ಉಳಿದು ಬಿಟ್ಟಿದ್ದು, ಬೆಳಕು ತೂರಿಹೋಗದ ನೆರಳು ಭಾಗ ಮಾತ್ರ ನೀರಿನಿಂದ ತೊಳೆಯಲ್ಪಡುವುದರಿಂದ ಈ ಜಾಗ ದಲ್ಲಿ ಬಟ್ಟೆ ಮೂಲ ರೀತಿಯಲ್ಲಿಯೇ ಇರುತ್ತದೆ. ಇದರಿಂದ ತೆರೆ ಯಮೇಲೆ ವಿನ್ಯಾಸದ ಪಡಿಯಚ್ಚು ಮೂಡುತ್ತದೆ.

## 5. ಪಡಿಯಚ್ಚು ತೆರೆಯಿಂದ ಪ್ರತಿಗಳನ್ನು ಮುದ್ರಿಸುವುದು

ತೆರೆಯಿರುವ ಚೌಕಟ್ಟನ್ನು ಕೀಲಿನ ಸಹಾಯದಿಂದ ಚಪ್ಪಟೆ ಮೇಜಿಗೆ ಜೋಡಿಸಬೇಕು ಅನಂತರ ಚೌಕಟ್ಟಿನ ಕೆಳಗೆ ಬೇಕಾದ ಹಾಳೆ, ಬಟ್ಟೆ ಇಲ್ಲವೆ ವಸ್ತುವನ್ನು ಇರಿಸಿ ಪಡಿಯಚ್ಚು ತೆರೆಯನ್ನು ಅದರ ಮೇಲೆ ಇಡಬೇಕು. ಆಮೇಲೆ ತೆರೆಯ ಮೇಲ್ಭಾಗದಲ್ಲಿ (ಕೀಲು ಇರುವ ಕಡೆ) ಅಚ್ಚಿನ ಶಾಯಿ, ಪೋಸ್ಟರ್ ಬಣ್ಣ ಅಥವಾ ಸ್ಕ್ರೀನ್ ಪ್ರಿಂಟಿಂಗ್ ಶಾಹಿಯನ್ನು ಕೊಂಚ ಪ್ರಮಾಣದಲ್ಲಿ ಸುರಿದು ಸ್ಕ್ವೀಜೀ ಎಂಬ ಸಾಧನದಿಂದ (ಹಿಡಿಯಿರುವ ಒಂದು ರಬ್ಬರ್ ಪಟ್ಟಿ) ಉಜ್ಜಬೇಕು. ಉಜ್ಜುವಾಗ ಒತ್ತಡ ಒಂದೇ ಸಮ ಇರುವಂತೆ ಎಚ್ಚರವಹಿಸುವುದು ಅಗತ್ಯ. ಇದರಿಂದ ಬಣ್ಣ ಒಂದೇ ಸಮನೆ ಹರಡಿಕೊಳ್ಳುತ್ತದೆ. ಅಲ್ಲದೆ ಉಜ್ಜುವ ದಿಕ್ಕು ಮೇಲಿಂದ ಕೆಳಕ್ಕೆ ಇಲ್ಲವೆ ಕೆಳಗಿನಿಂದ ಮೇಲಕ್ಕೆ ಮಾತ್ರ ಇರಬೇಕು. ಪಕ್ಕದಿಂದ ಪಕ್ಕಕ್ಕಾಗಲಿ ಒಂದೇ ಹಾಳೆಯ ಮೇಲೆ ಎರಡು ದಿಕ್ಕುಗಳಲ್ಲಾಗಲಿ ಉಜ್ಜಕೂಡದು.

ತೆರೆಯನ್ನು ರೇಶ್ಮೆ ನೈಲಾನ್ ಇಲ್ಲವೆ ಆರ್ಗಂಡಿ ಬಟ್ಟೆಗಳಿಂದ ಸಿದ್ಧಪಡಿಸಬಹುದು. ಸಾಧಾರಣವಾಗಿ 80 ಎಳೆಗಳ ನೈಲಾನ್ ಬಟ್ಟೆ ಬಹಳ ಉತ್ತಮ. ನೈಲಾನ್ ಬಟ್ಟೆಯ ಬಳಕೆಯ ವಿಶೇಷವೆಂದರೆ ಒಂದೇ ತೆರೆಯಿಂದ ನೂರಾರು ಪ್ರತಿಗಳನ್ನು ಮುದ್ರಿಸಬಹುದು.

ಹೀಗೆ ತೆರೆ ಮುದ್ರಣ ಕಲಾತ್ಮಕವಾಗಿ ಇರುವುದೊಂದೇ ಅಲ್ಲದೆ ಲಾಭದಾಯಕ ಕೈಗಾರಿಕೆಯೂ ಆಗಿದೆ.

## ಆಮ್ಲ ನಿಃಕ್ಷಾರಣ ಕಲೆ ಕರಕೌಶಲಕ್ಕೆ ಬೆಲೆ

ಕರಕೌಶಲವನ್ನು ಪರಿಣಾಮಕಾರಿಯಾಗಿಯೂ ಘಾರಾಳವಾಗಿಯೂ ಉಪಯೋಗಿಸಿಕೊಳ್ಳಲು ಆಧುನಿಕ ಕೈಗಾರಿಕೋದ್ಯಮದಲ್ಲಿ ಹೆಚ್ಚು ಅವಕಾಶವಿದೆ. ಸುಧಾರಿತಗೊಂಡ ಕೆಲವು ಕುಶಲ ಕಲೆಯಲ್ಲಿ ಆಮ್ಲ ನಿಃಕ್ಷಾರಣ ಕಲೆಯನ್ನು ಕೊರೆಯುವ ಕಲೆ ಎಂದೂ ಕರೆಯುವುದಿದೆ (ಆ್ಯಸಿಡ್ ಎಚ್ಚಿಂಗ್). ಲೋಹ, ಗಾಜು ಹಾಗೂ ಅಮೃತ ಶಿಲೆಗಳ ಮೇಲೆ ಸುಂದರ ವಿನ್ಯಾಸದ ಕಲಾಕೃತಿಯನ್ನು ಈ ವಿಧಾನದಿಂದ ಸುಲಭವಾಗಿ ಪಡೆಯಬಹುದು. ಆಮ್ಲ ನಿಃಕ್ಷಾರಣ ಕಲೆಯ ಮಾಧ್ಯಮವಾಗಿ ಬಳಸುವ ಲೋಹ, ಅಮೃತಶಿಲೆ, ಗಾಜುಗಳ ಧಾರಣ ಸಾಮರ್ಥ್ಯಕ್ಕೆ ಅನುಗುಣವಾಗಿ ಆಮ್ಲವನ್ನು ಉಪಯೋಗಿಸಬೇಕು. ಈ ಕಲಾಮಾಧ್ಯಮಕ್ಕೆ ಆಮ್ಲ ವಹಿಸುವ ಪಾತ್ರ ಒಂದು ಬಗೆಯಾದರೆ ಕಪ್ಪುರಾಳದ (ಡಾಂಬರು) ತೈಲವನ್ನು ಉಪಯೋಗಿಸುವ ವಿಧಾನ ಮತ್ತೊಂದು ಇದನ್ನು ಬಳಸುವ ವಿಧಾನವನ್ನು ಸಮಗ್ರವಾಗಿ ಅರಿತಿರಬೇಕು. ಆಮ್ಲವು ಅಪಾಯಕಾರಿಯಾದುದರಿಂದ ಮುನ್ನೆಚ್ಚರಿಕೆ ವಹಿಸಿ ಕೈಗಳಿಗೆ ರಬ್ಬರ್ ಕೈಕವಚ ಮತ್ತು ಉಪಯೋಗಿಸುವ ಚೌಕಟ್ಟು ಎಲ್ಲವನ್ನು ಕಪ್ಪುರಾಳದ ತೈಲದಿಂದಲೇ ಬಳಿದಿರಬೇಕು. ಆಮ್ಲ ನಿಃಕ್ಷಾರಣ ಕಲೆಯನ್ನು ರೂಪಿಸಿಕೊಳ್ಳಲು ಪ್ರಾರಂಭದಲ್ಲಿ ಸರಳ ವಿನ್ಯಾಸವನ್ನು ಬರೆದುಕೊಂಡು ಕ್ರಮೇಣ ಅತಿಸೂಕ್ಷ್ಮ ಕಲಾಕೃತಿಗೆ ಮುಂದುವರಿಯುವುದು ಸುಧಾರಿತ ಮಾರ್ಗ. ಸಾಧಾರಣವಾಗಿ ಈ ಕಲೆಯಲ್ಲಿ ಬಳಸುವ ಲೋಹಗಳು ಎಂದರೆ ಹಿತ್ತಾಳೆ, ಕಂಚು, ಅಲ್ಯೂಮಿನಿಯಂ, ಉಕ್ಕು, ಕಬ್ಬಿಣ,

ಇಂಡಾಲಿಯಂ, ತವರ, ಚಿನ್ನ ಮತ್ತು ಬೆಳ್ಳಿ.
ಅಲ್ಯೂಮಿನಿಯಂ ಲೋಹಕ್ಕೆ ಹೈಡ್ರೋಕ್ಲೋರಿಕ್ ಆಮ್ಲ.
ಹಿತ್ತಾಳೆಗೆ ನೈಟ್ರಿಕ್ ಆಮ್ಲ
ತಾಮ್ರಕ್ಕೆ ಎರಡು ಭಾಗ ನೈಟ್ರಿಕ್ ಆಮ್ಲಕ್ಕೆ ಒಂದು ಭಾಗ ಸಲ್ಫ್ಯೂರಿಕ್ ಆಮ್ಲದ ಮಿಶ್ರಣ
ಉಕ್ಕು ಅಥವಾ ಕಬ್ಬಿಣಕ್ಕೆ ಪೈರೋಲಿಗ್ನಿಯಸ್ ಆಮ್ಲ ಒಂದು ಭಾಗ ಮತ್ತು ನೈಟ್ರಿಕ್ ಆಮ್ಲ ಒಂದು ಭಾಗ ತೆಗೆದುಕೊಂಡು ಮಿಶ್ರಮಾಡಿ ಇವನ್ನು 6 ಭಾಗ ನೀರಿನೊಂದಿಗೆ ಲೀನ ಮಾಡಿದ ಮೇಲೆ ಲಭಿಸುವ ಆಮ್ಲ ಮಿಶ್ರಣ.
ಗಾಜಿಗೆ ಹೈಡ್ರೋಫ್ಲೂರಿಕ್ ಆಮ್ಲ.
ಅಮೃತಶಿಲೆಗೆ ದುರ್ಬಲ ಹೈಡ್ರೋಕ್ಲೋರಿಕ್ ಆಮ್ಲವನ್ನು ಉಪಯೋಗಿಸಬೇಕು.

### ತೈಲಮಿಶ್ರಣ

ಕಪ್ಪುರಾಳದ ತೈಲ ಮಿಶ್ರಣಕ್ಕೆ ಕಪ್ಪುರಾಳದ ಪುಡಿ ಒಂದು ಭಾಗ, ಬಿಳೀ ಮೇಣ (ಪ್ಯಾರಾಫಿನ್ ವ್ಯಾಕ್ಸ್) ಒಂದು ಭಾಗ ಕರ್ಪೂರದ ತೈಲ ಒಂದು ಭಾಗ, ವಾರ್ನಿಷ್ ಹತ್ತನೇ ಒಂದು ಭಾಗ ಹೀಗೆ ಇವನ್ನು ಒಟ್ಟಿಗೆ ಸೇರಿಸಿ ಕರಗಿಸಿ ಉಪಯೋಗಿಸಬಹುದು.

ಉದಾಹರಣೆಗೆ 100 ಗ್ರಾಮ್ ಬಿಳೀ ಮೇಣವನ್ನು ಒಂದು ಪಾತ್ರೆಯಲ್ಲಿಟ್ಟು, ಕುದಿಯುವವರೆವಿಗೂ ಕಾಸಬೇಕು. ಮೇಣವು ಕುದಿಯುತ್ತಿರುವಾಗಲೇ 100 ಗ್ರಾಮ್ ಕಪ್ಪುರಾಳದ ಪುಡಿಯನ್ನು ಬೆರೆಸಿ ಕರಗಿಸಬೇಕು. ಅನಂತರ !00ಮಿ.ಲಿ. ಕರ್ಪೂರದ ತೈಲವನ್ನು ಮತ್ತು 10 ಮಿ.ಲಿ. ವಾರ್ನಿಷ್ ತೈಲ

ನ್ನು ಸೇರಿಸಿ ಕುದಿಸಿ ಡಬ್ಬಿಯಲ್ಲಿ ಸಂಗ್ರಹಿಸಿ ತಿರುಪಿನಿಂದ
ದ್ರಪಡಿಸಬೇಕು. ನಿಃಕ್ಷಾರಣ ಕಾರ್ಯಕ್ಕೆ ಈ ಸಂಮಿಶ್ರಣ
ಲವನ್ನು ಉಪಯೋಗಿಸುವಾಗ ಅದು ತೀರಾ ಮಂದವೆನಿಸಿ
ರೆ ಬೇಕಿರುವಷ್ಟು ಹವಕ್ಕೆ ಕರ್ಪೂರದ ತೈಲವನ್ನು ಇವರೊಡನೆ
ರೆಸಿ ಉಪಯೋಗಿಸಬಹುದು.

## ರಡು ವಿಧಾನ

ಆಮ್ಲ ನಿಃಕ್ಷಾರಣ ಕಲೆಯಲ್ಲಿ ಚದುರಸ್ರ, ಯೋನಿ, ಅರ್ಧ
ಂದ್ರ, ತ್ರಿಕೋಣ, ವೃತ್ತ, ಷಡಸ್ರ, ಪದ್ಮ, ಅಷ್ಟಕೋಣ,
ಳ್ಳಿ ಮುಂತಾದ ವಿನ್ಯಾಸಗಳನ್ನು ಮತ್ತು ಪ್ರಕೃತಿಯ ಜೀವ
ಂತುಗಳ ಆಕೃತಿಗಳನ್ನು ಮೂಡಿಸಿಕೊಳ್ಳಬಹುದು. ಮೊದಲು
ನ್ಯಾಸವನ್ನು ಬೇಕಿರುವ ಅಳತೆಗೆ ತೆಳು ಹಾಳೆಯ ಮೇಲೆ
ರೆದುಕೊಂಡು ಕಾರ್ಬನ್ ಹಾಳೆಯ ನೆರವಿನಿಂದ ಲೋಹದ
ಗಡಿನ ಮೇಲೆ ಪ್ರತಿಯನ್ನು ಸುಲಭವಾಗಿ ತೆಗೆಯಬಹುದು.

ನಿಃಕ್ಷಾರಣ ಕಲೆಯಲ್ಲಿ ಎರಡು ವಿಧಾನಗಳಿವೆ. ವಿನ್ಯಾಸದ
ಲಯವನ್ನಾದರೂ ನಿಃಷಾರಣಕ್ಕೆ ಅಳವಡಿಸಬಹುದು ಅಥವಾ
ನ್ಯಾಸದ ಹೊರವಲಯವನ್ನಾದರೂ ಇದಕ್ಕೆ ಬಳಸಬಹುದು
ಂಬುದನ್ನು ಪ್ರಾರಂಭದಲ್ಲೇ ನಿಗದಿಪಡಿಸಿಕೊಳ್ಳಬೇಕು.
ದರಿಂದ ತೈಲ ಮಿಶ್ರಣವನ್ನು ತುಂಬಲು ಅನುಕೂಲವಾಗು
ದೆ.

ಈ ಕಾರ್ಯಕ್ಕೆ ಆದಷ್ಟು ಲೋಹವನ್ನು ಶುಚಿಯಾಗಿಟ್ಟದ್ದು.
ಕ್ಷಾರಣ ಕಲೆಯೂ ಉನ್ನತ ಮಟ್ಟದಲ್ಲಿರುತ್ತದೆ. ಕುಂಚದ
ಸಾಯದಿಂದ ಕಪ್ಪು ತೈಲ ಮಿಶ್ರಣವನ್ನು ಸಾಕಷ್ಟು ಮಂದ
ಾಗಿಯೇ ಬಳಿಯಬೇಕು. ಆಮ್ಲವನ್ನು ಲೋಹದ ಮೇಲೆ

ನಿಃಕ್ಷಾರಣ ಕ್ರಿಯೆಗಾಗಿ ಉಪಯೋಗಿಸುವಾಗ, ಆಮ್ಲ ಕ್ರಿಯೆಯ ಸಲುವಾಗಿ ಲೋಹವು ಬಿಸಿಯಾಗುವುದರಿಂದ ಮಿಶ್ರ ತೈಲವನ್ನು ತೆಳ್ಳಗೆ ಬಳಿದಿದ್ದರೆ ಕರಗುವ ಸಾಧ್ಯತೆ ಉಂಟು. ಇದರಿಂದ ನಿಃಕ್ಷಾರಣ ಕ್ರಿಯೆ ಸುಗಮವಾಗಿ ಸಾಗದು. ಉತ್ತಮ ಆಮ್ಲ ನಿಃಕ್ಷಾರಣ ಕ್ರಿಯೆಗೆ ದುರ್ಬಲ ಆಮ್ಲವನ್ನೇ ಉಪಯೋಗಿ ಸುವುದು ಸೂಕ್ತ. ಆದುದರಿಂದ ಒಂದು ಭಾಗ ಆಮ್ಲಕ್ಕೆ ಎರಡು ಭಾಗ ನೀರನ್ನು ಬೆರೆಸಿ ಇವನ್ನು ನಿಃಕ್ಷಾರಣ ಪ್ರಯೋಗಕ್ಕೆ ಉಪಯೋಗಿಸಬಹುದು. ಲೋಹದ ಒಂದು ಭಾಗ ಮಾತ್ರ ನಿಃಕ್ಷಾರಣ ಕ್ರಿಯೆಗೆ ಒಳಗಾಗದೆ ಅದರ ಮೇಲ್ಮೈಯೆಲ್ಲವೂ ಒಂದೇ ಸಮನಾಗಿ ನಿಃಕ್ಷಾರಣ ಹೊಂದಲು ಆಮ್ಲವನ್ನು ಪುಕ್ಕದ ನೆರವಿನಿಂದ ಲೋಹದ ಮೇಲೆ ಚಲಿಸುತ್ತಿರಬೇಕು. ಕ್ರಿಯೆ ಪೂರ್ಣಗೊಂಡ ಮೇಲೆ ವಿನ್ಯಾಸದ ಲೋಹದ ಮೇಲ್ಮೈಯಿಂದ ಆಮ್ಲವು ಚೆನ್ನಾಗಿ ಕಳೆದುಹೋಗುವಂತೆ ನೀರಿನಿಂದ ತೊಳೆಯ ಬೇಕು. ಲೋಹದ ಮೇಲೆ ಬಳಿದಿರುವ ಕಪ್ಪು ತೈಲಮಿಶ್ರಣ ವನ್ನು ತೆಗೆಯಲು ಕರ್ಪೂರದ ತೈಲವನ್ನೋ, ಸೀಮೆ ಎಣ್ಣೆ ಯನ್ನೋ, ಇಲ್ಲವೆ ಕಾರ್ಬನ್ ಟೆಟ್ರಾಕ್ಲೋರೈಡನ್ನೋ, ಬಟ್ಟೆಯಿಂದ ಲೇಪಿಸಿ ತಿಕ್ಕಿ ತೆಗೆಯಬಹುದು.

ಆಮ್ಲ ನಿಷಾರಣ ಕಲೆಗಾರಿಕೆಯನ್ನು ಕರಗತಮಾಡಿಕೊಂಡ ರೆ ಸುಲಭವಾಗಿ ಶೃಂಗಾರದ ಫಲಕ, ಮನೋಹರ ವಿನ್ಯಾಸದ ಕುಂಡ, ಸೂಕ್ಷ್ಮ ವಿನ್ಯಾಸದ ಆಕರ್ಷಕ ಆಭರಣ, ಸುಂದರ ಉಡುಗೊರೆ, ಸಲಕರಣೆಗಳು, ಮುದ್ರಣ ಪಡಿಯಚ್ಚು ಮುಂತಾ ದುವನ್ನು ಬಿಡುವಿನವೇಳೆಯಲ್ಲಿ ತಯಾರಿಸಿಕೊಂಡು. ಈ ಕರಕು ಶಲ ಕಲೆಯನ್ನು ಲಾಭದಾಯಕವಾಗೂ ಮಾಡಿಕೊಳ್ಳಬಹುದು.










ಚಿತ್ರ 1

ತೆರೆ ಮುದ್ರಣ : 1) ತೆರೆಯ ಮುದ್ರಣಕ್ಕೆ ಸಿದ್ಧವಾಗಿರುವ ವಿಷಯ ಪ್ರತಿ. 2) ಮುದ್ರಣಕ್ಕೆ ಸಿದ್ಧವಾಗಿರುವ ಪಡಿಯಚ್ಚಿನ ತೆರೆ 3) ತೆರೆಯಚ್ಚಿನಿಂದ ತೆಗೆದ ಪಡಿಯಚ್ಚು

## ಕುಶಲಕಲೆಯಲ್ಲಿ ಒಂದು ಹೊಸ ತಂತ್ರ

### ಮರದಲ್ಲಿ ಉಬ್ಬು ವಿನ್ಯಾಸ

ಕರ್ನಾಟಕ ಕಲಾವೈಭವ ಬಹು ಹಿಂದಿನಿಂದಲೂ ಜಗತ್ಪ್ರಸಿದ್ಧ. ವರ್ಣರಂಜಿತ ತೈಲ ಚಿತ್ರಗಳು, ದಂತ ಹಾಗೂ ಗಂಧದ ಮರದ ಸೂಕ್ಷ್ಮ ಕೆತ್ತನೆ ಕೆಲಸಗಳು, ಶಿಲ್ಪಕಲೆ ಇತ್ಯಾದಿಗಳೆಲ್ಲದರಲ್ಲೂ ನಮ್ಮ ನಾಡಿಗೆ ತನ್ನದೇ ಆದ ಸ್ಥಾನವಿರುವುದು ಸುಳ್ಳಲ್ಲ.

ನವ್ಯದ ಪ್ರಭಾವಕ್ಕೆ ಒಳಗಾದ ಕುಶಲಕಲೆ ಇಂದು ತನ್ನ ವೈವಿಧ್ಯವನ್ನು ಹೆಚ್ಚಿಸಿಕೊಂಡಿದೆ. ಮರದ ಹಲಗೆಯ ಮೇಲೆ ಬೇಕಾದ ಆಕೃತಿಗಳನ್ನು ಲೋಹದ ಅಚ್ಚುಗಳ ಸಹಾಯದಿಂದ ಮೂಡಿಸಿ, ಆಕೃತಿಗಳ ಉಬ್ಬು ಚಿತ್ರಣವನ್ನು ತೆಗೆಯುವುದೂ ಒಂದು ನವ್ಯ ತಾಂತ್ರಿಕ ವಿಧಾನ. ಈ ವಿಧಾನದಲ್ಲಿ ಬಳಸುವ ತಂತ್ರಗಳು ತೋರಿಕೆಗೆ ಜಟಿಲವಾಗಿ ಕಂಡರೂ, ನಿಜವಾಗಿ ಇದು ಸರಳವಾದದ್ದು. ಭಾರತದಲ್ಲಿ ಕೆತ್ತು ಜೋಡಣೆಯ ಕುಶಲ ಕರ್ಮಿಗಳು ರೂಪಿಸುವಂಥ ಕಲಾಕೃತಿಗಳು ಎಲ್ಲರಿಗೂ ಪರಿಚಯವಿದೆ. ಕೆಲವು ಮರಗಳಲ್ಲಿ ಗಂಟಿರುವ ಭಾಗವನ್ನು ಅಡ್ಡ ಸೀಳಿ ನೋಡಿದಾಗ ಕೆಲವು ಬಗೆಯ ನೈಸರ್ಗಿಕ ಅರೆಕೊರೆಯ ಆಕಾರಗಳನ್ನು ಅಲ್ಲಿ ಕಾಣಬಹುದು. ಆ ಆಕಾರಗಳನ್ನೇ ಗುರಿಯಾಗಿಟ್ಟುಕೊಂಡು ಅಂಥ ಸ್ಥಳಗಳಲ್ಲಿ ಅಗತ್ಯವಿದ್ದಷ್ಟು ಮಾತ್ರ, ರೇಖೆಗಳನ್ನು ಬರೆದು ಆ ಆಕಾರಗಳಿಗೆ ಸ್ಪಷ್ಟರೂಪು ಕೊಡಬಹುದು. ಈ ಕ್ರಮವನ್ನೇ ಆಧಾರವಾಗಿಟ್ಟುಕೊಂಡು ಮತ್ತೊಂದು ಹೊಸ ಬಗೆಯ ತಂತ್ರವನ್ನು ಇಲ್ಲಿ ಸೂಚಿಸಿದೆ.

### ಸಲಕರಣೆಗಳು

ಕಬ್ಬಿಣದ ಮೊಳೆಗಳು, ಸಲಾಕಿ, ಚಪ್ಪಟೆಯ ಪಟ್ಟಿ, ಹಲವು ಬಗೆಯ ಅರಗಳು, ಕಬ್ಬಿಣ ಕೊಯ್ಯುವ ಹ್ಯಾಕ್‌ಸಾ, ಗರಗಸ,

ಹತ್ತುರಿ ಹಾಗೂ ಹಗುರವಾದ, ಮೃದುವಾದ ಮರದ ಹಲಗೆಗಳು.

ಸಿದ್ಧ ಮಾಡಿರುವ ಲೋಹದ ಅಚ್ಚಿಗೆ ಹೊಂದುವಂತೆ ಮರದ ಹಲಗೆಯ ಮೇಲೆ ಬೇಕಾದ ಆಕೃತಿಗಳನ್ನು ಬರೆದುಕೊಳ್ಳಬೇಕು. ಇಲ್ಲವೆ ಬರೆದಿರುವ ವಿನ್ಯಾಸಕ್ಕೆ ತಕ್ಕಂತೆ ಲೋಹದ ಅಚ್ಚುಗಳನ್ನಾದರೂ ಮೊದಲು ಸಿದ್ಧಪಡಿಸಿಕೊಳ್ಳಬೇಕು. ಮರದ ಹಲಗೆ ವೃತ್ತಾಕಾರದಲ್ಲಿದ್ದರೂ (ತಟ್ಟೆಯಂತೆ) ಅಥವಾ ಚೌಕಾಕಾರದಲ್ಲಿದ್ದರೂ ನಮ್ಮ ಕೆಲಸಕ್ಕೆ ಅಡ್ಡಿಯಾಗದು.



ಚಿತ್ರ 2 ನೀರಿನ ಆವಿಗೆ ಒಡ್ಡಿದ ನಂತರ ಒತ್ತು ಗುರುತುಗಳು ಉಬ್ಬಿರುವುದು

1. ಹಲಗೆಯ ಮೇಲೆ ಬೇಕಾದ ಆಕೃತಿಯನ್ನು ಸಿದ್ಧಪಡಿಸಿಕೊಳ್ಳಬೇಕು.

2. ಸಿದ್ಧಪಡಿಸಿರುವ ಲೋಹದ ಅಚ್ಚನ್ನು ಮರದ ಮೇಲಿನ ಆಕೃತಿಗೆ ಹೊಂದಿಸಿ ಅಚ್ಚಿನ ಮೇಲೆ ಹೊಡೆದಾಗ ಪೆಟ್ಟಿನ ಆಘಾತಕೆ ಕೆಳಗಿನ ಮರದ ಭಾಗ ಇಳಿಯುತ್ತದೆ. ಆಕೃತಿ ಇರುವ ಜಾಗದ ಮೇಲೆಲ್ಲಾ ಆಯಾಯ ಅಚ್ಚುಗಳನ್ನಿಟ್ಟು ಸುತ್ತಿಗೆಯಿಂದ ಹೊಡೆದು ಮರದ ಮೇಲ್ಮೈಯ ತಗ್ಗುಗಳನ್ನು ಪಡೆಯಬಹುದು. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ತಗ್ಗುಗಳು ಒಂದೇ ಮಟ್ಟದಲ್ಲಿರುವಂತೆ ನೋಡಿಕೊಳ್ಳಬೇಕು (1/5 ಅಂಗುಲ ಕುಗ್ಗಿದರೆ ಸಾಕು).

3. ತಗ್ಗುಗಳ ಬುಡದ ನೇರಕ್ಕೆ ಸರಿಯಾಗಿ ಹಲಗೆಯ ಮೇಲಿನ ಪದರವನ್ನು ಹತ್ತರಿಯಿಂದ ತೆಗೆಯಬೇಕು. ಹೀಗಾದಾಗ ಹಲಗೆಯ ಮೇಲ್ಮೈ ಸಮತಲವಾಗಿದ್ದು ಅದರ ಮೇಲೆ ಆಕೃತಿಯ ಒತ್ತು ಗುರುತುಗಳು ಮಾತ್ರ ಇರುತ್ತವೆ.

4. ಒತ್ತು ಗುರುತುಗಳಿರುವ ಭಾಗವನ್ನು ನೀರಿನ ಆವಿಗೆ ಒಡ್ಡಿದಾಗ, ಒತ್ತರಿತಗೊಂಡ ಒತ್ತು ಗುರುತಿನ ಭಾಗಗಳು ಮಾತ್ರ ಹೊರಗೆ ಉಬ್ಬುತ್ತವೆ. ಈ ಉಬ್ಬುವಿಕೆಯ ಎತ್ತರ 1/5 ಅಂಗುಲವಷ್ಟೇ ಇರುವುದನ್ನು ಇಲ್ಲಿ ಗಮನಿಸಬಹುದು.

ಇದರಲ್ಲಿ ಮೂರು ಬಗೆ ಇದೆ:

## ನೀರಿನ ಆವಿ ಪಡೆಯುವ ವಿಧಾನ

1. ನಾವು ಬಳಸುವ ಮರದ ವ್ಯಾಸದಷ್ಟೇ ಇರುವಂಥ ಪಾತ್ರೆಯನ್ನು ಉಪಯೋಗಿಸಬಹುದು. ಪಾತ್ರೆಗೆ ಕಾಲುಭಾಗದಷ್ಟು ನೀರನ್ನು ಹಾಕಿ ಕುದಿಸಿ. ನೀರು ಚೆನ್ನಾಗಿ ಮರಳಿದ

ಮೇಲೆ ಹಲಗೆಯನ್ನು ಪಾತ್ರೆಯ ಮೇಲೆ ಮುಚ್ಚಳದಂತೆ ಇರಿಸಿ. ಒತ್ತು ಗುರುತುಗಳು ಕೆಳಮುಖವಾಗಿರಬೇಕಾದ್ದು ಅಗತ್ಯ. ಸ್ವಲ್ಪ ಹೊತ್ತು ಬಿಟ್ಟು ಹಲಗೆಯನ್ನು ತೆಗೆಯಿರಿ ನಯನ ಮನೋಹರವಾದ ಉಬ್ಬು ಆಕೃತಿಗಳು ಮೂಡಿ ಬರುತ ವೆ.

2. ಪ್ರೆಷರ್ ಕುಕ್ಕರ್‌ಗೆ ಸ್ವಲ್ಪ ನೀರನ್ನು ಹಾಕಿ ಮುಚ್ಚಿಸಿ. ಆವಿಯ ಒತ್ತಡದ ಕಿಂಡಿಯ ಮೇಲೆ ಭಾರವನ್ನಿಡಬೇಡಿ. ಸ್ವಲ್ಪ ಹೊತ್ತಿನಲ್ಲೇ ಆವಿ ಕಿಂಡಿಯ ಮೂಲಕ ಹೊರಬರುತ್ತದೆ. ಆವಿಗೆ ಒತ್ತು ಗುರುತುಗಳಿರುವ ಹಲಗೆಯನ್ನು ಒಡ್ಡಿದರೆ ಉಬ್ಬುಚಿತ್ರ ಗಳು ಕಾಣಿಸಿಕೊಳ್ಳುತ್ತವೆ.

3. ಕಾಫಿ ಕೆಟಲನ್ನು ಮೇಲೆ ತಿಳಿಸಿರುವಂತೆಯೇ ಬಳಸ ಬಹುದು. ಒತ್ತರಿಸಿದ ಯಾವುದೇ ವಸ್ತುವನ್ನಾಗಲಿ ಅದರ ನೈಜಸ್ಥಿತಿಗೆ ತರಬೇಕಾದರೆ ತೇವ ಮತ್ತು ಉಷ್ಣ ಈ ಎರಡೂ ಪ್ರಧಾನ ಅಂಶಗಳಾಗಿರುತ್ತವೆ. ಮರದ ಹಲಗೆಯೊಳಕ್ಕೆ ಒತ್ತರಿಸಲ್ಪಟ್ಟಿರುವ ಆಕೃತಿಯ ಭಾಗವನ್ನು ಪಾತ್ರೆಯಿಂದ ಹೊರಬರುತ್ತಿರುವ ಆವಿಗೆ ಒಡ್ಡಿದಾಗ ಆ ಭಾಗಕ್ಕೆ ತೇವ ಮತ್ತು ಉಷ್ಣಗಳೆರಡೂ ದೊರಕಿದಂತಾಗುವುದು. ಆದ್ದರಿಂದ ಆ ಭಾಗ ಉಬ್ಬುತ್ತದೆ. ಹೀಗಾಗಿ ಉಬ್ಬು ಚಿತ್ರ ಕಾಣಿಸಿ ಕೊಳ್ಳುತ ದೆ

ಕ್ರಮಬದ್ಧ ರೀತಿಯಲ್ಲಿ ಇವನ್ನು ರೂಢಿಸಿಕೊಂಡರೆ ಮುದ್ರ ಣಕಾರರಿಗೆ ಇದರಿಂದ ಹೆಚ್ಚು ಅನುಕೂಲವಾಗುವುದು. ಅಲ್ಲದೆ ಆರ್ಥಿಕವಾಗಿಯೂ ವೃತ್ತಿಯಲ್ಲಿ ಹೆಚ್ಚು ಲಾಭಗಳಿಕೆ ಸಾಧ್ಯ.

## ಉಬ್ಬು ಚಿತ್ರಕಲೆ

ಭಾರತವು ಪುರಾತನ ಕಾಲದಿಂದಲೂ ವಿವಿಧಕಲೆಗಳಿಗೆ ಹೆಸರಾಗಿದೆ. ಗುಹಾಂತರ ದೇವಾಲಯಗಳ ಚಿತ್ರಗಳು, ಹರಪ್ಪ ಮೊಹೆಂಜೊದಾರೊ, ಬಾದಾಮಿ, ಎಲಿಫಾಂಟಾ ಗುಹಾಲಯ, ಅಜಂತಾ, ಹಳೇಬೀಡು, ಬೇಲೂರು, ಸೋಮನಾಥಪುರ ಶಿಲ್ಪಕಲೆ ಇವು ಭಾರತೀಯ ಶಿಲ್ಪಕಲೆಯ ಸಮುನ್ನತಿಗೆ ಸಾಕ್ಷಿ. ನಮ್ಮ ಪೂರ್ವಿಕರು ಚಿತ್ರಕಲೆಗಳಲ್ಲಿ ಅನೇಕ ಬಗೆಯ ಸಂಶೋಧನೆಗಳನ್ನು ಪಡೆದ ವಿಚಾರಗಳನ್ನು ಯಾರಿಗೂ ಹೇಳಿಕೊಡದೆಯೂ ಮತ್ತು ಬರವಣಿಗೆಯಲ್ಲಿ ಉಲ್ಲೇಖಿಸದೆಯೂ ನಿರರ್ಥಕಗೊಳಿಸಿದವರ ಸಂಖ್ಯೆಯೇ ಹೆಚ್ಚು. ಭಾರತ ಸರ್ಕಾರದವರು ಇವುಗಳ ಬಗ್ಗೆ ಒಂದು ಸಂಶೋಧನಾಲಯವನ್ನೇ ನಿರ್ಮಿಸಿ, ನುರಿತ ಕಲಾವಿದರ ನೆರವಿನಿಂದ ನಶಿಸಿ ಹೋದ ನಮ್ಮ ಹಳೆಯ ಕಲೆಗಳು ಮತ್ತೆ ನೈವೇತ್ತುವಂತೆ ಮಾಡಿರುವುದು ಪ್ರಶಂಸಾರ್ಹ. **ಪ್ರಾಚೀನ ಕಲಾವಿದರ ಪದ್ಧತಿಯನ್ನೇ ಅನುಸರಿಸಿ ಒಂದು ನವ್ಯ ರೀತಿಯಲ್ಲಿ ವಿವಿಧ ಬಗೆಯ ಹೊಸ ಹೊಸ ವಿನ್ಯಾ**ಸಗಳು ಇಂದು ರೂಪುಗೊಂಡು ಪ್ರಪಂಚದ ಅನೇಕ ಭಾಗದ ಜನರನ್ನು ಆಕರ್ಷಿಸಿವೆ.

ಸೆಂಟ್ರಲ್ ಹ್ಯಾಂಡಿಕ್ರಾಫ್ಟ್ ಡೆವಲಪ್‌ಮೆಂಟ್ ಸೆಂಟರ್ ಇರುವುದು ಬೆಂಗಳೂರಿನಲ್ಲಿ.

ಪ್ರಾಚೀನ ಭಾರತದಲ್ಲಿ ಒಂದೊಂದು ಪ್ರಾಂತ್ಯಕ್ಕೂ ಒಂದೊಂದು ಶೈಲಿಯಿತ್ತು. ಹಿಂದಿನ ಮೈಸೂರು ಸಂಸ್ಥಾನದಲ್ಲಿ ರಾಜಾಮನೆತನದವರ ಕಲೆಗಾರಿಕೆ ಪ್ರಸಿದ್ಧ. ಮದರಾಸು ಪ್ರಾಂತಕ್ಕೆ ಸೇರಿದ ತಂಜಾವೂರಿನ ಉಬ್ಬು ಕಲೆ ಹೆಸರುವಾಸಿಯಾದದ್ದು.

ಉಬ್ಬು ಕಲೆಗಾರಿಕೆಗೆ ತಂಜಾವೂರಿನಲ್ಲಿ ಬಹಳ ಪ್ರಾಮುಖ್ಯ ವಿತ್ತು. ಈ ಕಲೆಗಾರಿಕೆಯಲ್ಲಿ ಬರೆಯುತ್ತಿದ್ದುದು ಹೆಚ್ಚಾಗಿ ದೇವತೆಗಳ ಚಿತ್ರಗಳೇ. ಈ ಕಲೆಗೆ ಬಳಸುವ ಪದಾರ್ಥಗಳು ಮತ್ತು ಸಲಕರಣೆಗಳೆಲ್ಲಾ ಬಹಳ ಸರಳ ರೀತಿಯವು ಹಾಗೂ ಎಲ್ಲಿಡೆಯೂ ಸಿಗುವ ವಸ್ತುಗಳು. ಈ ಕಲೆಯನ್ನು ಕರಗತ



ಚಿತ್ರ 3 ಉಬ್ಬು ಚಿತ್ರಕಲೆಯಲ್ಲಿ ತ್ರಿಮೂರ್ತಿ

ಮಾಡಿಕೊಳ್ಳುವುದು ಸುಲಭ ಸಾಧ್ಯ, ವಿಷಯದ ತಂತ್ರ ಮತ್ತು ಬಳಸುವ ಪದಾರ್ಥಗಳ ಅರಿವಿದ್ದರೆ ಕೆಲಸ ಸುಗಮವಾಗುತ್ತದೆ.

## ರೂಪಿಸುವ ಕ್ರಮ

ಮೊದಲೇ ಸಿದ್ಧಪಡಿಸಿದ್ದ ದೇವತೆಯ ಚಿತ್ರವನ್ನು ಪ್ರತಿ ಮಾಡುವ ತೆಳುಹಾಳೆಯ ಮೇಲೆ ಬರೆದು ಸಿದ್ಧಪಡಿಸಿಟ್ಟುಕೊಳ್ಳಬೇಕು. ಚಿತ್ರದ ಅಳತೆಗೆ ಸರಿಹೊಂದುವ ಅಳತೆಗೆ ಪ್ಲೈವುಡ್ ಹಲಗೆಯನ್ನು ಕತ್ತರಿಸಿ ಅದರ ಮೇಲೆ ಒಂದು ತೆಳ್ಳನೆಯ ಬಟ್ಟೆಯನ್ನು ಹುಣಿಸೇ ಅಂಟಿನಿಂದ ಅಂಟಿಸಬೇಕು. ಬಟ್ಟೆಯು ಚೆನ್ನಾಗಿ ಅಂಟಿಕೊಂಡ ಮೇಲೆ, ಹುಣಿಸೇ ಅಂಟಿನಿಂದ ಚಾಕ್ ಪೌಡರನ್ನು ಮಿಶ್ರಮಾಡಿ, ಈ ಮಿಶ್ರಣವನ್ನು ಹಲಗೆಗೆ ಅಂಟಿಸಿರುವ ಬಟ್ಟೆಯ ಮೇಲೆ ಹರಡಿ ಅನಂತರ ತೆಂಗಿನನಾರಿನಿಂದ ಒಂದೇ ಸಮನೆ ಹರಡುವಂತೆ ಮಾಡಬೇಕು. ಹಲಗೆಯು ಚೆನ್ನಾಗಿ ಒಣಗಿದ ಮೇಲೆ ಸಿದ್ಧಪಡಿಸಿರುವ ಚಿತ್ರವನ್ನು ಪ್ರತಿಮಾಡುವ ಹಾಳೆಯ ಮೇಲಿಟ್ಟು ಬರೆದು ಸಿದ್ಧಪಡಿಸಿಟ್ಟುಕೊಳ್ಳಬೇಕು. ಈಗ ಹಲಗೆಯು ಚಿತ್ರಿಸಲು ಸಿದ್ಧವಾಯಿತು. ಬೇಕಿರುವ ಪುಡಿಗಳು: ಹುಣಿಸೇ ಬೀಜದ ಪುಡಿ, ಚಾಕ್‌ಪೌಡರ್, ಹಸೀಸುಣ್ಣದ ಪುಡಿ. ಇವಲ್ಲದೆ ಮರವಜ್ರ, ಕುಂಚ ಅವಶ್ಯ. ಪ್ರಾರಂಭದಲ್ಲಿ ಹುಣಿಸೇಬೀಜವನ್ನು ಚೆನ್ನಾಗಿ ಕುಟ್ಟಿ ; ನೀರಲ್ಲಿ ನೆನೆಸಬೇಕು. ಅನಂತರ ಒರಳಲ್ಲಿ ಈ ಹುಣಿಸೇ ಹಿಟ್ಟನ್ನು ಚೆನ್ನಾಗಿ ತಿರುವಬೇಕು. ಈ ಹಿಟ್ಟನೊಡನೆ ನೀರನ್ನು ಮಿಶ್ರಮಾಡಿ ಒಲೆಯ ಮೇಲಿಟ್ಟು ಚೆನ್ನಾಗಿ ಕುದಿಸಬೇಕು. ಅಂಟು ಕಂದು ಬಣ್ಣಕ್ಕೆ ತಿರುಗುವವರೆಗೂ ಕಾಯಿಸಬೇಕು. ಅಂಟಕೆ ಭದ್ರವಾಗಿರಬೇಕಾದ್ದರಿಂದ, ಅಂಟನ "ಸರಿ" ತೆಳ್ಳಗಿರಬೇಕು. ಮಿಶ್ರ

ಮಾಡಿಕೊಳ್ಳಲು ಮಾತ್ರ, ಅದು ಮಂದವಾಗಿರಬೇಕು. ಹಸಿ
ಸುಣ್ಣದ ಕಲ್ಲನ್ನು ಚೆನ್ನಾಗಿ ಕುಟ್ಟಿ ಪುಡಿಮಾಡಿ ಸಿದ್ಧಪಡಿ
ಬೇಕು ಈ ಹಸೀ ಸುಣ್ಣದ ಪುಡಿಗೆ ಚಾಕ್ ಪೌಡರನ್ನು ಸೇರಿಸಿ
ಮರವಜ್ರದ ಅಂಟಿನೊಡನೆ ಮಿಶ್ರಮಾಡಬೇಕು. ಈ ಮಿಶ್ರ
ದೊಡನೆ ಹುಣಿಸೇ ಅಂಟನ್ನು ಸೇರಿಸಿ ಬೇಕಿರುವ ಮಂದಕ್ಕೆ
ಸಿದ್ಧಪಡಿಸಿಟ್ಟುಕೊಳ್ಳಬೇಕು. ಈ ಮಿಶ್ರಣವೇ ನಮಗೆ ಬೇಕಾಗಿ
ರುವ 'ಸರಿ'.

ಚಿತ್ರ ಬರೆಯುವುದಕ್ಕೆ ಬಳಸುವ ಕುಂಚವನ್ನು
ನಾವೇ ಸಿದ್ಧಪಡಿಸಿಟ್ಟುಕೊಳ್ಳುವುದೊಳ್ಳೆಯದು. ಮನೆ ಗುಡಿ
ಸುವ ಪೊರಕೆಯ ಹೂಗಳನ್ನು ಒಟ್ಟಾಗಿ ಸೇರಿಸಿ ಬೇಕಿರುವ
ಮಂದಕ್ಕೆ ಬರುವಂತೆ ಒಟ್ಟುಗೂಡಿಸಿ ಅದನ್ನು ಒಂದು ಮರದ
ಹಿಡಿಗೆ ಸಿಕಿಸಬೇಕು. ಈ ಕುಂಚವೇ ಚಿತ್ರ ಬರೆಯಲು ಉಪ
ಯೋಗಕ್ಕೆ ಬರುತ್ತದೆ.

ಮೊದಲು ದೇವತೆಯ ರೇಖಾಚಿತ್ರವನ್ನು ಬಟ್ಟೆ ಅಂಟಿಸಿರುವ
ಹಲಗೆಯ ಮೇಲೆ ಸಿದ್ಧಪಡಿಸಿರುವ ಅಂಟಿನಿಂದ ಬರೆಯಬೇಕು.
ಅಂಟು ಒಣಗದಂತೆ ಅಂಟಿನ ಪಾತ್ರೆಯ ಮೇಲೆ ಒದ್ದೆ ಬಟ್ಟೆ
ಯಿಂದ ಮುಚ್ಚಿರಬೇಕು. ಚಿತ್ರದ ವಿವಿಧ ಭಾಗಗಳಿಗೆ ಅಗತ್ಯ
ಬಣ್ಣಗಳನ್ನು ಹಚ್ಚಬೇಕು. ಚಿತ್ರದಲ್ಲಿ ಕಾಣುವ ಆಭರಣ
ಭಾಗಗಳ ಮೇಲೆ ಚಿನ್ನದ ಮೆರಗು ಬರುವುದಕ್ಕೆ ಚಿನ್ನದ ಹಾಳೆ
ಯನ್ನು ಬೇಕಾದ ಆಕಾರಕ್ಕೆ ಕತ್ತರಿಸಿಕೊಂಡು ಆ ಭಾಗಗಳ
ಮೇಲೆ ಅಂಟಿಸಬೇಕು. ಹೀಗೆ ಅಂಟಿಸಿದಾಗ ಉಬ್ಬು ಚಿತ್ರ
ಒಡನೇ ವ್ಯಕ್ತವಾಗುತ್ತದೆ. ಪ್ರಾರಂಭದಲ್ಲಿ ತುಸು ಕಷ್ಟವಾ
ಕಂಡರೂ ಅಭ್ಯಾಸವಾದ ಮೇಲೆ ಬಹಳ ಸುಲಭವಾಗುತ್ತದೆ

## ಶಬಲ ಖಚಿತ ಚಿತ್ರಕಲೆ

ಕಲಾಕೃತಿಯ ಮಾಧ್ಯಮ ಕಲೆಗಾರರ ಮೇಲೆ ಅನ್ವಯಿಸುತ್ತದೆ. ವಿವಿಧ ಬಣ್ಣಗಳ ಸಣ್ಣ ಸಣ್ಣ ಗಾಜಿನ ಚೂರು, ಕಲ್ಲು ಚೂರು, ಪಿಂಗಾಣಿಯ ಚೂರು ಮೊದಲಾದುವನ್ನು ಬಳಸಿಕೊಂಡು ಅದನ್ನು ನಿರ್ದಿಷ್ಟ ರೀತಿಯಲ್ಲಿ ಜೋಡಿಸಿ ಚಿತ್ರ ನಿರ್ಮಿಸುವ ಒಂದು ಪದ್ಧತಿ ಇತ್ತು. ಈ ಕಲೆಯಲ್ಲಿ ಬಣ್ಣದ ನೇರ ಬಳಕೆ ಇಲ್ಲ. ಒಬ್ಬೊಬ್ಬ ಕಲಾವಿದನೂ ಒಂದೊಂದು ವಿಧಾನ ಅನು



ಚಿತ್ರ 4 ಶಬಲ ಖಚಿತ ಚಿತ್ರ "ಕೋಳಿ ಜಗಳ"

ಸರಿಸುತ್ತಿದ್ದ. ಕಲಾವಿದ ತನ್ನ ಚಿತ್ರಕ್ಕೆ ಮೆರಗು ಕೊಡಲು ವಿವಿಧ ರೀತಿಯ ಬಣ್ಣಗಳನ್ನೂ ಕುಂಚಗಳನ್ನೂ ಉಪಯೋಗಿಸುವುದು ಸಹಜ. ಪಿಂಗಾಣಿಯ ಚೂರುಗಳನ್ನು ಒಂದು ನಿರ್ದಿಷ್ಟ ರೀತಿಯಲ್ಲಿ ನಯನಮನೋಹರವಾಗುವಂತೆ ಜೋಡಿಸುವ ಕಲೆ ಶಬಲ ಖಚಿತ ಚಿತ್ರಣ.

ಇದು ಬಲು ಪುರಾತನ ಕಲೆ. ಅಂದು ಈಗಿನಂತೆ ಸಿಮೆಂಟು ಅಥವಾ ವಿವಿಧ ಬಗೆಯ ಅಂಟುಗಳು ಇರಲಿಲ್ಲ. ನೆಲವನ್ನು ಸಮಗೊಳಿಸಲು ಗಾರೆಯನ್ನು ಬಳಸಿ ಸಾರಿಸುತ್ತಿದ್ದರು. ಕಲಾವಿದರು ವಿವಿಧ ವರ್ಣದ ಪಿಂಗಾಣಿಯ ಚೂರುಗಳನ್ನು ಶೇಖರಿಸಿ ಅವನ್ನು ತಮಗೆ ಬೇಕಾದ ವಿನ್ಯಾಸಕ್ಕೆ ಜೋಡಿಸಿ ಕುಶಲ ಕಲೆಗಾರಿಕೆಯನ್ನು ಪ್ರದರ್ಶಿಸುತ್ತಿದ್ದರು. ಇದರಲ್ಲಿ ಸೊಗಸುಗಾರಿಕೆಯೊಂದೇ ಅಲ್ಲದೆ, ನೆಲವು ಬಹಳ ವರ್ಷ ಕಾಲ ಉಳಿಯುವ ಬಾಳಿಕೆ ಗುಣವೂ ಇರುತ್ತಿತ್ತು.

**ಚರ್ಚುಗಳಲ್ಲಿ**

ಗ್ರೀಕ್ ಮತ್ತು ರೋಮನರು ಪ್ರಾರಂಭಿಸಿದ ಶಬಲ ಖಚಿತ ಚಿತ್ರಕಲೆ, ಇತರ ದೇಶಗಳಿಗೂ ಹರಡಿತ್ತು. ಈ ವಿಧಾನದಿಂದ ಹೆಚ್ಚಾಗಿ ಯೂರೋಪಿನ ಚರ್ಚುಗಳ ನೆಲವನ್ನು ಅಲಂಕರಿಸುತ್ತಿದ್ದರು. ಕ್ರೈಸ್ತನ ಜೀವನವನ್ನು ಚಿತ್ರಿಸುವ ಸುಂದರ ವಿನ್ಯಾಸಗಳನ್ನು ಕಿಟಕಿಗಳ ಮೇಲೆ ತುಂಬುತ್ತಿದ್ದರು. ಇಂಥ ಶಬಲ ಖಚಿತ ಚಿತ್ರ ನಿರ್ಮಿಸುವ ಕುಶಲ ಕಲಾವಿದರಿಗೆ ಹೆಚ್ಚಿನ ಪ್ರೋತ್ಸಾಹವೂ ದೊರಕಿತ್ತು. ಅಂದು ಈ ಕುಶಲ ಕೈಗಾರಿಕೆಗೆ ಬಣ್ಣ ಬಣ್ಣದ ಕಲ್ಲು, ಅಮೃತಶಿಲೆ, ಬಣ್ಣದ ಗಾಜು ಮತ್ತು ಪಿಂಗಾಣಿಯ ಚೂರುಗಳನ್ನು ಉಪಯೋಗಿಸುತ್ತಿದ್ದರು. ಹಗಲಲ್ಲಿ

ೂರ್ಯನ ಕಿರಣಕ್ಕೂ ರಾತ್ರಿಯ ವೇಳೆ ಮೊಂಬತ್ತಿಗಳ ಪ್ರಕಾ
ಕ್ಕೂ ಶಬಲ ಖಚಿತ ಚಿತ್ರಗಳು ನಕ್ಷತ್ರದಂತೆ ಮಿನುಗಿ, ಚರ್ಚ್
ಆವರಣ ದೇವಲೋಕವೋ ಎಂಬಂತೆ ಭಾಸವಾಗುತ್ತಿತ್ತು.
ಬಲ ಖಚಿತ ಚಿತ್ರ ವಿಧಾನ ಜನಪ್ರಿಯಗೊಂಡು, ಅದು
ೂತೀಯ ಚರ್ಚ್, ಕಥೀಡ್ರಲ್‌ಗಳಿಂದ ಅರಮನೆಗಳಿಗೂ
ೀಮಂತರ ಮನೆಗಳಿಗೂ ಪ್ರವೇಶಿಸಿತು.

ಅಗ್ನಿ ಪರ್ವತಗಳಿಂದ ನಾಶಗೊಂಡ ಪಾಂಪೆಯಲ್ಲಿ ದೊರೆತ
ಲವು ಶಬಲ ಖಚಿತ ಚಿತ್ರ ವಿನ್ಯಾಸಗಳ ಉಳಿಕೆಯಿಂದ ಇಂಥ
ಲೆ ಅಂದೂ ಇತ್ತು ಎಂದು ತಿಳಿದು ಬಂದಿದೆ. ಭೂಮಿಯಲ್ಲಿ
ೂರೆತ ಕೆಲವು ಪುರಾತತ್ವ ಮಹತ್ವದ ವಸ್ತುಗಳನ್ನು ಸಂಗ್ರಹಿ
ರುವ ಸಂಗ್ರಹಾಲಯಗಳ ನೆರವಿನಿಂದಲೂ ಈ ಕುಶಲ ಕಲೆ
ಹಳ ಪ್ರಾಚೀನವಾದದ್ದೆಂಬ ವಿಷಯ ಸ್ಪಷ್ಟವಾಗಿದೆ.

**ಿತ್ರಣ ವಿಧಾನ**

**ಶಬಲ ಖಚಿತ ಚಿತ್ರಕಲೆಯನ್ನು ಎರಡು ವರ್ಗಗಳಲ್ಲಿ ವಿಭಾ**
ಸಬಹುದು:

1. ಪಿಂಗಾಣಿ, ಅಮೃತಶಿಲೆ, ಬಣ್ಣ ಬಣ್ಣದ ಕಲ್ಲುಗಳ ಚೂರುಗಳು, ವಿವಿಧ ವರ್ಣಗಳ ಪಿಂಗಾಣಿಯ ಚೂರುಗಳನ್ನು ನೆಲದ ಮೇಲೆ ಜೋಡಿಸಿ ಚಿತ್ರಿಸುವುದು.
2. ಬಣ್ಣ ಬಣ್ಣದ ಗಾಜಿನ ಚೂರುಗಳನ್ನು ಕಿಟಕಿಯ ಅಥವಾ ಗುಮ್ಮಟಾಕಾರದ ಶಿಖರಗಳ ಮೇಲೆ ಸರಿ ಹೊಂದಿಕೊಂಡು ಜೋಡಿಸುವುದು ಇನ್ನೊಂದು ಬಗೆ.

ಮೊದಲನೆಯದರಲ್ಲಿ ಬಳಸುವ ಅಂಟು ಪದಾರ್ಥ ಸಿಮೆಂಟು
ಾರೆ ಮತ್ತು ಮಣ್ಣು. ಆದರೆ ಎರಡನೆಯ ವಿಧಾನದಲ್ಲಿ ಮೆತು

ವಾದ ಸೀಸದ ಕಂಬಿಗಳನ್ನು ಬೆಸುಗೆ ಹಾಕಿ, ಅನಂತರ ಅವನ್ನು ಕಿಟಕಿಯ ಜಾಗಕ್ಕೆ ಹೊಂದಿಕೊಳ್ಳುವಂತೆ ಸೇರಿಸುತ್ತಿದ್ದರು.

ಶಬಲ ಖಚಿತ ಚಿತ್ರ ವಿನ್ಯಾಸವನ್ನು ನೆಲದ ಅಳತೆಗೆ ಸರಿ ಹೊಂದುವಂತೆ ಸಿದ್ಧಪಡಿಸುತ್ತಿದ್ದರು. ಚಿತ್ರಿಸುವ ನೆಲವನ್ನು ಸಮಮಾಡಿ ರೇಖಾ ಚಿತ್ರವನ್ನು ಬರೆದು ಬಿಡಿ ಭಾಗಗಳಿಗೆ ಸರಿ ಹೊಂದುವ ಬಣ್ಣದ ಚೂರುಗಳನ್ನು ಹೊಂದಿಕೊಂಡು, ನಯ ಗಾರೆಯ ಸಹಾಯದಿಂದ ಚೂರುಗಳನ್ನು ಒಂದು ಭಾಗದಿಂದ ಜೋಡಿಸುತ್ತಿದ್ದರು. ಪ್ರಾರಂಭದಲ್ಲಿ ಅಸ್ಪಷ್ಟವೆನಿಸುವ ಈ ಚಿತ್ರ ಪೂರ್ತಿಯಾದ ಮೇಲೆ ಒಂದು ಮನೋಜ್ಞ ಚಿತ್ರಕೃತಿ ಯಾಗಿ ಮಾರ್ಪಡುತ್ತಿತ್ತು.

ಎರಡನೆಯ ವರ್ಗದಲ್ಲಿ ಕಿಟಕಿ ಅಥವಾ ಗೋಪುರದ ಅಳತೆಗೆ ಸರಿ ಹೊಂದುವ ಚೌಕಟ್ಟನ್ನು ಸಿದ್ಧಪಡಿಸಿಟ್ಟುಕೊಂಡು ಬಣ್ಣ ಬಣ್ಣದ ಗಾಜಿನ ಚೂರುಗಳನ್ನು ಸೀಸದ ಕಂಬಿಯಿಂದ ಚೌಕಟ್ಟಿಗೆ ಬೆಸೆಯುತ್ತಿದ್ದರು.

ಹಳೆಯ ಮೈಸೂರು ರಾಜ್ಯದ ಮಹಾರಾಜರಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರ್‌ರವರು ಹಿಂದೂ ಸಂಪ್ರದಾಯದ ದಶಾವತಾರ ಚಿತ್ರಗಳನ್ನು ಗಾಜಿಗೆ ಮೊಸೈಕ್ ಕಲೆಯಾಗಿ ರೂಪಿಸಿ, ಅವನ್ನು ಗುಮ್ಮಟಾಕಾರದಲ್ಲಿ ಜೋಡಿಸಿ ಆ ಗುಮ್ಮಟವನ್ನು ಇಡಲು ಮೈಸೂರಿನ ನಿಷಾದ್‌ಬಾಗ್ ಉದ್ಯಾನದ ಮಧ್ಯೆ ಒಂದು ಸುಂದರ ಮಂಟಪವನ್ನು ಕಟ್ಟಿಸಿದರು. ಈಗಲೂ ಈ ಮಂಟಪದ ಸುಂದರ ವಿನ್ಯಾಸವನ್ನು ನೋಡಬಹುದು. ಮೈಸೂರು ಅರಮನೆಯ ಒಳಭಾಗದ ಮಯೂರಮಹಲ್, ದರ್ಬಾರ್ ಕೊಠಡಿಗಳ ಮೇಲ್ಛಾವಣಿಯ ಸುಂದರ ಶಬಲ

ಚಿತ ಗಾಜುಗಳ ಜೋಡನೆಯು ಚಮತ್ಕಾರವನ್ನು ಇಂದೂ
ನೋಡಬಹುದು.

ಅಂದು ಹೆಚ್ಚಾಗಿ ಬಳಕೆಯಲ್ಲಿದ್ದ ಪಿಂಗಾಣಿ ಹಾಗೂ ಬಣ್ಣದ
ಜಿನ ಚೂರುಗಳು ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತಿ
ದರ ಕಾರಣ ಈ ಕಲೆಗಾರಿಕೆಯನ್ನು ನಿರ್ವಹಿಸುವುದು
ಕ್ಕಾಗಿ ತೊಂದರೆಯದಾಗಿರಲಿಲ್ಲ. ಆದರೆ ಇಂದು ಬಣ್ಣ-
ದ ಪಿಂಗಾಣಿ ಮತ್ತು ಗಾಜುಗಳು ಸುಲಭವಾಗಿ ದೊರಕ
ವುದರಿಂದ ಮೊಸೈಕ್ ಚಿತ್ರಕಲೆ ನಶಿಸುತ್ತಿದೆ.



ಚಿತ್ರ 5 ಶಬಲ ಖಚಿತ ಚಿತ್ರ "ಗುರಿ"

ಲೇಖಕ ಒಂದು ಹೊಸ ಶೈಲಿಯಲ್ಲಿ ನಾನಾ ಬಣ್ಣಗಳನ್ನು ಬಳಸಿಕೊಂಡು ಮೊಸೈಕ್ ಚಿತ್ರಕಲೆಗೆ ಸರಿಸಮಾನವಾಗಿ ಕಲೆಗಾರಿಕೆಯನ್ನು ನಡೆಸಿದ್ದಾರೆ. ಅದಕ್ಕೆ ಸಂಬಂಧಿಸಿದ ಪ್ರಯೋಗದ ವಿವರಗಳು ಹೀಗಿವೆ:

ಚಿತ್ರದಲ್ಲಿ ಬರೆದಿರುವಂತೆ, ಬಿಡಿ ಬಿಡಿ ಭಾಗಗಳ ಜಾಗವನ್ನು ಕಲ್ಲಿನ ಚೂರಿನ ಆಕಾರಕ್ಕೆ ಬರೆದುಕೊಂಡು ಜಾಗವನ್ನು ಸರಿಹೊಂದಿಸಿಕೊಳ್ಳಬೇಕು. ಚೂರುಗಳ ರೇಖಾವಿಭಾಗಕ್ಕೆ ಸರಿಹೊಂದಿರುವ ಬಣ್ಣವನ್ನು ಬಿಡಿ ಬಿಡಿಯಾಗಿ ತುಂಬಬೇಕು. ಇಲ್ಲಿ ಗಮನದಲ್ಲಿಡಬೇಕಾದ ವಿಷಯವೆಂದರೆ ಮಿಶ್ರಮಾಡುವ ಬಣ್ಣವನ್ನು ಸ್ವಲ್ಪ ಹೆಚ್ಚಾಗಿಯೇ ತೆಗೆದುಕೊಳ್ಳಬೇಕು. ಏಕೆಂದರೆ ಬಣ್ಣಗಳ ಮಿಶ್ರಣದಲ್ಲಿ ಯಾವುದೇ ವ್ಯತ್ಯಾಸವೂ ಆಗಬಾರದು. ಈ ರೀತಿ ಶಬಲ ಖಚಿತ ಚಿತ್ರವನ್ನು ಸ್ವಲ್ಪ ದಪ್ಪ ರಟ್ಟಿನ ಮೇಲೆ ಬರೆಯುವುದು ಒಳ್ಳೆಯದು. ಬಿಡಿ ಭಾಗಗಳ ಮೇಲೆ ಬಣ್ಣ ತುಂಬಿ ಎಲ್ಲಾ ಭಾಗವನ್ನೂ ಮುಗಿಸಿದ ಮೇಲೆ ವಾರ್‌ನಿಷ್ ಬಳಿಯುವುದು ಸೂಕ್ತ. ಈ ಚಿತ್ರಕ್ಕಾಗಿ ಹೂ, ಪಕ್ಷಿ, ಮೃಗ, ಮಾನವ, ದೇವತೆ ಅಥವಾ ಪ್ರಕೃತಿಯ ವಿವಿಧ ಭಾವಗಳನ್ನಾದರೂ ಚಿತ್ರಿಸಬಹುದು. ಸುಂದರವಾದ ಶಬಲ ಖಚಿತ ಚಿತ್ರಕ್ಕೆ ಬಳಸುವ ಬಣ್ಣ ಗಾಢವಾಗಿದ್ದರೆ ಜೊತೆಗೂಡಿಸುವ ಬಿರುಕಿನ ಜಾಗಕ್ಕೆ ತೆಳು ಬಣ್ಣವಿರಬೇಕು. ಶಬಲ ಖಚಿತ ಬಿಡಿ ಭಾಗಗಳು ತ್ರಿಕೋನ, ಚದುರ ಅಥವಾ ಯಾವ ರೂಪವಾದರೂ ತಾಳಿರಬಹುದು. ಆದರೆ ಜೋಡಿಸುವ ಮರ್ಯಾದೆ ತಿಳಿದಿರಬೇಕು. ಶಬಲ ಖಚಿತದ ಮತ್ತೊಂದು ಬಗೆ ಎಂದರೆ ಪಿಂಗಾಣಿಯ ಚೂರಿನಂತೆಯೇ ರಟ್ಟಿನಲ್ಲಿ ತುಂಡರಿಸಿ ಬಣ್ಣ ಬಳಿದೆ ಅಂಟಿಸಿ ಚಿತ್ರ ಪಡೆಯಬಹುದು.

ಶಿಸಿಹೋದ ಈ ಕುಶಲ ಕಲೆ ಒಂದು ನವ್ಯ ರೂಪವನ್ನೇ
ಾಳಿವಂತಾಗುತ್ತದೆ. ವಿರಾಮ ವೇಳೆಯ ಸದುಪಯೋಗ
ಂದು ಲಾಭದಾಯಕವೇ ಆಗುತ್ತದೆ.

## ಬೆಂಡಿನಿಂದಲೇ ತಯಾರಿಸುವ ವಿವಿಧ ಹೂ ಹಾರಗಳು

ಬೆಂಡಿನ ಗಿಡವನ್ನು ಸಸ್ಯಶಾಸ್ತ್ರದಲ್ಲಿ ಇಶ್ಕಿನಾಮಿನಿ ಎಂದು ಕರೆಯುತ್ತಾರೆ. ಈ ಜಲಸಸ್ಯ ನಮ್ಮ ಸಂಸ್ಥಾನದ ಎಲ್ಲ ಕೆರೆ ಕಟ್ಟೆಗಳಲ್ಲಿಯೂ ಹಾಗೂ ನಿಧಾನವಾಗಿ ಹರಿಯುತ್ತಿರುವ ಹೊಳೆಗಳ ಪಕ್ಕದಲ್ಲಿಯೂ ಹೇರಳವಾಗಿ ಬೆಳೆಯುತ್ತದೆ. ಲೆಗ್ಯುಮಿನೋಸಿ ಕುಟುಂಬಕ್ಕೆ ಸೇರಿದ ಈ ಸಸ್ಯದ ಕಾಂಡ ಬೆಂಡಾಗಿದ್ದು ಸುಮಾರು 1 ರಿಂದ 3 ಅಂಗುಲದಷ್ಟು ಸುತ್ತಳತೆ ಗಳಿಸುತ್ತದೆ. ಪುರಾತನ ಕಾಲದಿಂದಲೂ ಹಿಂದೂ ಮದುವೆ ಗಳಲ್ಲಿ ಗಂಡು ಹೆಣ್ಣುಗಳಿಗೆ ಕಟ್ಟುವ ಸುಂದರ ಬಾಸಿಂಗ ಗಳನ್ನು ಈ ಬೆಂಡಿನಿಂದಲೇ ನಮ್ಮವರು ತಯಾರಿಸುತ್ತಿದ್ದರೂ ಬೆಂಡಿನ ಇತರೇ ಉಪಯೋಗಗಳ ಬಗ್ಗೆ ಅವರ ಗಮನ ಹೆಚ್ಚು ಬಿದ್ದಿಲ್ಲ. ಬೇಸಿಗೆಯಲ್ಲಿ ಕೆರೆಗಳು ಒಣಗಿದಾಗ ಹೇರಳವಾಗಿ ಕಂಡುಬರುವ ಈ ಬೆಂಡು ಉಪಯೋಗಿಸಲ್ಪಡದೆ ಹಾಳಾಗು ವುದೇ ಹೆಚ್ಚು.

ಈ ಬೆಂಡಿನಿಂದ ಅನೇಕ ಸುಂದರ ವಸ್ತುಗಳನ್ನು ತಯಾರಿಸ ಬಹುದಾಗಿದೆ. ಗಿಡವನ್ನು ಬುಡದಲ್ಲಿ ಕತ್ತರಿಸಿ ಒಳ್ಳೆಯ ಭಾಗವನ್ನೆಲ್ಲಾ ಸಂಗ್ರಹಿಸಿ, ಆ ಬೆಂಡುಗಳನ್ನೆಲ್ಲ ಒಣಗಿಸಿಟ್ಟು ಕೊಳ್ಳಬೇಕು. ಹರಿತವಾಗಿರುವ ಚಾಕಿನ ಸಹಾಯದಿಂದ ಈ ಬೆಂಡಿನ ಸಿಪ್ಪೆಯನ್ನೆಲ್ಲಾ ಚೆನ್ನಾಗಿ ಹೆರೆದು ಹಾಕಿದರೆ ಒಳಗಿ ರುವ ಶುಭ್ರ ಶ್ವೇತ ವರ್ಣದ ನುಣ್ಣನೆಯ ಬೆಂಡು ಕಂಡು ಬರುತ್ತದೆ.

### ಸುಸಂಪ್ರದಾಯ

ಭಗವಂತನಿಗೆ ಪುಷ್ಪಗಳು ಬಹುಪ್ರಿಯವಾದುವು. ಪುಷ್ಪ

ರಗಳನ್ನು ತಯಾರಿಸಿ ಅವನ್ನು ಭಕ್ತಿಪೂರ್ವಕವಾಗಿ ಅರ್ಪಿ
ವುದು ನಮ್ಮ ಒಂದು ಸುಸಂಪ್ರದಾಯ ಆದರೆ ಭಕ್ತನಿಗೆ
ದೇ ಕೊರತೆ. ತಾನು ಅರ್ಪಿಸಿದ ಹೂಗಳು ಶಾಖಾನಿಲಗಳ
ಳಿಯಿಂದ ಮೂರನೇ ದಿನಕ್ಕೆ ಬಾಡಿ ಹೋಗಿ ನಿರ್ಮಾಲ
ಗುತ್ತವಲ್ಲಾ ಎಂದು. ಇದಕ್ಕಾಗಿ ಆತ ಬಹುಬಾರಿ
ೋಚಿಸಿ ದೇವಲೋಕದ, ಯಾವಾಗಲೂ ಬಾಡದಿರುವ
ಂದರ ಪಾರಿಜಾತದ ಬಗ್ಗೆ ಕನಸುಗಳನ್ನು ಕಂಡದ್ದುಂಟು.
ನು ತಯಾರಿಸಿದ ತುಳಸೀಮಣಿ ಹಾರಗಳಾಗಲೀ, ರುದ್ರಾಕ್ಷಿ
ರಗಳಾಗಲೀ ಸುಂದರತೆಗೆ ಹಾಗೂ ಕೋಮಲತೆಗೆ ಪಾರಿ
ತದ ಹಾರಕ್ಕಣೆಯಾಗಲಿಲ್ಲ. ಆತ ಇತ್ತೀಚೆಗೆ ತಯಾರಿ
ದ ರೇಷ್ಮೆಗೂಡುಗಳ ಹಾರವನ್ನಂತೂ ಅವು ಪ್ರಾಣಿ ಹಿಂಸೆ
ದ ಬಂದವು ಎಂದು ಅನೇಕರು ಭಗವಂತನಿಗರ್ಪಿಸಲು
ಪಡುವುದಿಲ್ಲ. ಹೀಗಾಗಿ ಭಗವದರ್ಪಣೆಗಾಗಿಯೋ
ವಾ ಸೌಂದರ್ಯಾರಾಧನೆಗಾಗಿಯೋ ಯಾವಾಗಲೂ ಬಾಡ
ವ ಸುಂದರ ಪ್ರಕೃತದತ್ತವಾದ ಬಹುಕಾಲ ಬಾಳಿಕೆ
ವ ಪುಷ್ಪಹಾರವೊಂದನ್ನು ತಯಾರಿಸಲು ಸತತವಾಗಿ
ಪಡಲಾಗಿದೆ. ಬೆಂಡಿನ ಗಿಡದ ಕಾಂಡದಿಂದ ನಾವು
ದರ ಪುಷ್ಪಹಾರಗಳನ್ನು ತಯಾರಿಸಬಹುದಾಗಿದೆ.

1. ಗುಲಾಬಿ ಹಾರ
2. ಮಲ್ಲಿಗೆ ಹಾರ
3. ಮಲ್ಲಿಗೆ ಮೊಗ್ಗುಗಳ ಹಾರ
4. ಸಂಮೋಹಿನಿ ಹಾರ

ುಲಾಬಿ ಹಾರವನ್ನೇ ಆಗಲಿ ಅಥವಾ ಮಲ್ಲಿಗೆ ಹೂಗಳ
ವನ್ನೇ ಆಗಲಿ ತಯಾರಿಸಬೇಕಾದಾಗ ಬೆಂಡನ್ನು

ಬೆಂಡಿನ ಹಾರಗಳು

ಅ. ಬೆಂಡನ್ನುಯಾವ ಅಳತೆಗೆ ಬೇಕೋ ಆ ಅಳತೆಗೆ ಕತ್ತರಿಸಿ ಕೊಂಡು

ಆ. ಅರ್ಧಕ್ಕೆ ಸರಿಯಾಗಿ ಮಡಚಬೇಕು.

ಇ. ಕೊನೆ ಹಾಗೂ ಮಧ್ಯ ಭಾಗವನ್ನು ಬೇಕಾದ ಆಕಾರಕ್ಕೆ ರೂಪಿಸಿಕೊಳ್ಳಬೇಕು.

ಈ. ಕೊನೆಗಳನ್ನು ಸೇರಿಸಿ ಮೊಗ್ಗಿನ ಆಕಾರಕ್ಕೆ ಅಳವಡಿಸಿ ಕೊಳ್ಳಬೇಕು.

ಉ. ಈ ರೀತಿ ರೂಪಿಸಿದ ಮಲ್ಲಿಗೆ ಮೊಗ್ಗುಗಳನ್ನು ಸೇರಿಸಿ ಹೂ ಹಾರ ಮಾಡುವ ವಿಧಾನ.

1. ಗುಲಾಬಿ ಹಾರ
2. ಮಲ್ಲಿಗೆ ಹಾರ
3. ಮಲ್ಲಿಗೆ ಮೊಗ್ಗುಗಳ ಹಾರ
4. ಸಂಮೋಹಿನಿ ಹಾರ

ಮೊದಲು ಹೂಗಳ ಆಕೃತಿಗೆ ಕತ್ತರಿಸಿಕೊಳ್ಳಬೇಕು. ಅನಂತರ ನೀರಿನ ಹಬೆಗೆ ಈ ಕತ್ತರಿಸಿದ ಭಾಗಗಳನ್ನು ಕೆಲವು ಸೆಕೆಂಡು ಗಳವರೆಗೆ ಹಿಡಿದು ಕೂಡಲೇ ಬೆರಳುಗಳ ಸಹಾಯದಿಂದ ಆಯಾ ಹೂಗಳ ದಳಗಳ ಆಕೃತಿಯನ್ನು ತಿದ್ದಿಮಾಡಿಸಬೇಕು. ಹೀಗೆ ತಯಾರಿಸಿದ ಬಿಡಿ ಹೂಗಳನ್ನೆಲ್ಲಾ ದಾರ ಪೋಣಿಸಿದ ಸೂಜಿಯ ಸಹಾಯದಿಂದ ಒತ್ತಾದ ದಂಡೆಯನ್ನು ಕಟ್ಟಬಹುದು. ಈ ಶ್ವೇತಹಾರವೇ ಮಲ್ಲಿಗೆ ಹಾರ. ಸಾಮಾನ್ಯವಾಗಿ ಮನೋಹರ ವಾಗಿರುತ್ತದೆ. ಗುಲಾಬಿ ಹಾರಕ್ಕೆ ಪ್ರಕೃತಿ ಸಹಜ ಗುಲಾಬಿ ವರ್ಣವನ್ನೇ ಬರಿಸಬೇಕಾದಲ್ಲಿ, ಗುಲಾಬಿ ಬಣ್ಣವನ್ನು ನೀರಿ ನಲ್ಲಿ ತಿಳಿಯಾಗಿ ಕಲಸಿ ಈ ಹಾರವನ್ನು ಒಂದು ಸಾರಿ ಅದ್ದಿ ಅನಂತರ ಗಾಳಿಯಲ್ಲಿ ಒಣಗಿಸಿದರೆ ಆಕರ್ಷಕ ಗುಲಾಬಿ ಹಾರವೇ ಆಗಿರುತ್ತದೆ. ಈ ಹಾರಗಳು ಎಷ್ಟು ಸಹಜವಾಗಿರ ಬಲ್ಲುವೆಂದರೆ ಇವನ್ನು ಸ್ವಲ್ಪ ಹೊತ್ತು ಹೊರಗಡೆ ಹಿಡಿದು ನಿಂತರೆ ಸಾಕು, ದುಂಬಿಗಳು ಇವು ನೈಸರ್ಗಿಕ ಪುಷ್ಪಗಳೇ ಇರ ಬೇಕೆಂದು ಭ್ರಮಿಸಿ, ಈ ಪುಷ್ಪಗಳ ಸಮೀಪಕ್ಕೆ ಬಂದು ನಿರಾಶೆ ಹೊಂದಿ ಹಿಂತಿರುಗುವುದುಂಟು.

ಮೊಗ್ಗುಗಳ ಹಾಗೂ ಸಂಮೋಹಿನಿ ಹಾರಗಳ ತಯಾರಿಕೆಗೆ ಅಷ್ಟೇನೂ ಚಾಕಚಕ್ಯತೆ ಕೈಚಳಕ ಬೇಕಾಗಿಲ್ಲ. ಬೆಂಡನ್ನು ನಯವಾಗಿ ಕೊಯ್ದು ಗೊತ್ತಾದ ಆಕೃತಿಗಳನ್ನು ತಯಾರಿ ಸಿದರೆ ಸಾಕು.

ಸುಂದರ ಪ್ರಕೃತಿದತ್ತ ವಸ್ತುಗಳಿಗೆ ಯಾವಾಗಲೂ ಪೆಟಿಯ ಆಕರ್ಷಣೆ ಇದ್ದೇ ಇರುತ್ತದೆ. ವಿವಿಧ ಆಕರ್ಷಕ ಬಣ್ಣ ಗಳನ್ನು ಉಪಯೋಗಿಸಿ ಸುಂದರ ಪುಷ್ಪಹಾರಗಳು, ಹೂದಂಡೆ ಗಳೂ, ಮಕ್ಕಳ ವಿವಿಧ ಆಟದ ಸಾಮಗ್ರಿಗಳು, ಬೊಂಬೆಗಳು

ಇವನ್ನೆಲ್ಲಾ ಈ ಸಾಮಾನ್ಯ ಬೆಂಡಿನಲ್ಲಿ ಮಾಡಬಹುದಾಗಿದೆ.
ಹೂಗಳಂತೆಯೇ ಬೆಂಡು ಹಗುರವಾಗಿರುವುದರಿಂದ ಚಿತ್ರಪಟ
ಗಳಿಗೆ ಆಕರ್ಷಕ ಹಾರಗಳನ್ನಾಗಿ ಇವನ್ನು ಉಪಯೋಗಿಸಲು
ಯಾವ ಅಡ್ಡಿ ಆತಂಕಗಳೂ ಇರುವುದಿಲ್ಲ. ಈ ಹಾರಗಳ
ತಯಾರಿಕೆಗೆ ತಗಲುವ ಕಾಲ ಅತ್ಯಲ್ಪ. ವಿಶೇಷ ಚಾಕಚಕ್ಯತೆಯ
ಅವಶ್ಯಕತೆ ಇಲ್ಲ. ಯಾರೂ ಬೇಕಾದರೂ ಇವನ್ನು ತಯಾರಿಸಿ
ಕೊಳ್ಳಬಹುದು. ಹಳ್ಳಿಗಳ ಕೆರೆ ಕಟ್ಟೆಗಳಲ್ಲಿ ಬೆಳೆಯುವ ಈ
ಬೆಂಡಿನ ಗಿಡವನ್ನು ಬುದ್ಧಿವಂತ ರೈತರು ಸದುಪಯೋಗಪಡಿಸಿ
ಕೊಂಡಲ್ಲಿ ವಾರ್ಷಿಕ ಆದಾಯಗಳು ಹೆಚ್ಚುವುದಿರಲಿ, ವಿರಾಮ
ವೇಳೆಯನ್ನು ಸುಂದರ ವಸ್ತುಗಳ ತಯಾರಿಕೆಗಾಗಿ ವಿನಿಯೋಗಿ
ಸಿದಂತೆಯೂ ಆಗುತ್ತದೆ.

## ಬಾಂಧಣಿ ಕಲೆ

### ದಾರದ ಬಂಧನ ; ನವ ವಿನ್ಯಾಸದ ನಂದನ

ಮಾನವ ಪ್ರಾರಂಭದಲ್ಲಿ ಇತರ ಮೃಗಗಳಂತೆಯೇ ಬೆತ್ತಲೆಯಾಗಿ ಜೀವಿಸುತ್ತಿದ್ದ. ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುವುದೊಂದೇ ಅವನ ನಿತ್ಯಕರ್ಮವಾಗಿತ್ತು. ಹೀಗೆ ಪ್ರಾಣಿಗಳನ್ನು ಕೊಲ್ಲುತ್ತಿದ್ದ ಮಾನವ ಕ್ರಮೇಣ ಅದರ ಚರ್ಮವನ್ನು ಹೊದಿಕೆಯಾಗಿ ಬಳಸಲು ಕಲಿತ. ಮುಂದೆ ಅದೇ ಚರ್ಮ ಕವಚದ ರೂಪದಲ್ಲಿ ಅವನ ಮೈಯನ್ನು ಅಲಂಕರಿಸಿತು.

ಆದಿನಿಂದ ಇಂದಿನವರೆಗೆ ಮಾನವನ ಉಡುಪು ಎಷ್ಟೋ ಹಂತಗಳನ್ನು ದಾಟಿ ಬಂದಿದೆ ನಾರಿನ ಬಟ್ಟೆಯಿಂದ ಅರಳೆ ಬಟ್ಟೆಯವರೆಗೆ ಒಂದು ಹಂತವಾದರೆ ಅಲ್ಲಿಂದ ಮುಂದಕ್ಕೆ ನಾವೆಲ್ಲ ಕಾಣುತ್ತಿರುವಂತೆ ಬಗೆ ಬಗೆಯ ಬಟ್ಟೆಗಳ ನಿರ್ಮಾಣ ಭರದಿಂದ ಸಾಗಿದೆ.

ಬಹು ಹಿಂದಿನಿಂದಲೂ ಉಡುಪನ್ನು ಶೃಂಗರಿಸಲು ನಾನಾ ಬಗೆಯ ಬಣ್ಣ, ವಿನ್ಯಾಸ, ಪಡಿಯಚ್ಚುಗಳನ್ನು ಉಪಯೋಗಿಸುವುದು ವಾಡಿಕೆಯಲ್ಲಿತ್ತು. ಮಧ್ಯ ಪ್ರದೇಶ, ರಾಜಾಸ್ಥಾನ, ಮಹಾರಾಷ್ಟ್ರ ಹಾಗೂ ಗುಜರಾತಿನ ಜನರು ಸರಳ ರೀತಿಯಲ್ಲಿ ತಮ್ಮ ಉಡುಪುಗಳನ್ನು ದಾರದಿಂದ ಬಂಧಿಸಿ ಬಣ್ಣ ಕಟ್ಟುತ್ತಿದ್ದರು. ಈ ಕಲೆಯೇ ಬಾಂಧಣಿ ಕಲೆ.

### ಪ್ರಪಂಚ ಮಾರುಕಟ್ಟೆ

ಆ ಕಾಲದಲ್ಲಿ ಭಾರತೀಯರು ತಯಾರಿಸಿದ ಉಡುಪುಗಳಿಗೆ ಪ್ರಪಂಚದ ಎಲ್ಲ ಮಾರುಕಟ್ಟೆಗಳಲ್ಲೂ ಅಪಾರ ಬೇಡಿಕೆ

ುದ್ದಿತ್ತು. ಉಡುಪು ತಯಾರಿಕೆಯನ್ನು ವೃತ್ತಿಯಾಗಿ ಹಿಡಿ
ುವ್ವವರು ಅತ್ಯಂತ ಸುಖದಿಂದ ಜೀವಿಸುತ್ತಿದ್ದ ಕಾಲ ಅದು.
ಅವರೆ ನಮ್ಮ ಈ ಪ್ರಾಚೀನ ಕಲೆಗಳೆಲ್ಲಾ ಬ್ರಿಟಿಷರ ಆಳ್ವಿಕೆ
ಯಲ್ಲಿ ಕ್ರಮೇಣ ನಾಮಾವಶೇಷವಾಯಿತು. ಬ್ರಿಟಿಷರು
ಮ್ಮ ದೇಶದ ಗಿರಣಿ ಬಟ್ಟೆಗಳನ್ನು ಭಾರತಕ್ಕೆ ತಂದು. ಅಗ
ಾಗಿ ಮಾರಾಟ ಮಾಡಿ ದೇಶೀಯ ವಸ್ತ್ರಗಳಿಗೆ ಮಾರುಕಟ್ಟೆ
ಲ್ಲದ ಹಾಗೆ ಮಾಡಿದರು ಅವರ ಈ ಕುಟಿಲ ನೀತಿಯ ಫಲ
ಾಗಿ ಒಂದು ಮಹಾನ್ ಕಲೆಯೇ ಕಣ್ಮರೆಯಾಗುವಂತಾ
ಯಿತು.

ಭಾರತ ಸ್ವಾತಂತ್ರ್ಯಗಳಿಸಿದ ನಂತರ ಪುನಃ ಈ ಪ್ರಾಚೀನ
ಲೆ ಸ್ವಲ್ಪ ಸ್ವಲ್ಪವಾಗಿ ತಲೆ ಎತ್ತಿಕೊಳ್ಳಲು ಅವಕಾಶ
ಾಯಿತು. ಈ ದಿಸೆಯಲ್ಲಿ ಸರಕಾರದ ಪ್ರೋತ್ಸಾಹವೂ ಗಣ
ೀಯ. ಬಾಂಧಣಿ ಕಲೆ ತುಂಬಾ ಸರಳವಾದುದು. ಹೆಚ್ಚು
ರಿಶ್ರಮವಿಲ್ಲದೆ ಬಣ್ಣಕಟ್ಟುವ ಕಲೆಯನ್ನು ಕರಗತಮಾಡಿ
ೊಂಡು ಬೇಕಿರುವ ವಿನ್ಯಾಸಗಳನ್ನು ಬಗೆ ಬಗೆಯ ಬಣ್ಣಗಳಿಂದ
ತ್ರಿಸಬಹುದು.

ೀಕಾದ ಸಲಕರಣೆಗಳು

ಬಣ್ಣದ ಪುಡಿಯನ್ನು ಮಿಶ್ರಮಾಡಿಕೊಳ್ಳಲು 3 ಬಕೆಟ್ಟು
ಳೂ, ಬೇಕಿರುವ ಬಣ್ಣದ ಪುಡಿಗಳೂ, ದೃಢೀಕರಿಸಲು ರಾಸಾ
ಯನಿಕ ವಸ್ತುಗಳು (ಅಡಿಗೆ ಉಪ್ಪು, ಸೋಡಿಯಂ ಕಾರ್ಬೋ
ೀಟ್, ಹೈಡ್ರೋಕ್ಲೋರಿಕ್ ಆಸಿಡ್), ಮೇಣದ ದಾರ,
ಣ್ಣ ಹಾಕಬೇಕಾಗಿರುವ ಬಟ್ಟೆ (ಹತ್ತಿ, ಲಿನನ್, ಸೆಣಬು,
ಲ್ಕ್ ಅಥವಾ ರೇಷ್ಮೆ ಬಟ್ಟೆಗಳು).

ಬಣ್ಣ ಹಾಕುವ ಮೊದಲು ಬಟ್ಟೆಯನ್ನು ಗಂಜಿ ಹಾಗೂ ಕೊಳೆ ಇಲ್ಲದಂತೆ ಶುಚಿ ಮಾಡಬೇಕು (ಇಲ್ಲದಿದ್ದರೆ ಬಣ್ಣವು ಸರಿ ಯಾಗಿ ಅಂಟುವುದಿಲ್ಲ). ಶುಚಿ ಮಾಡಿದ ಬಟ್ಟೆಯನ್ನು ನೀರಿ ನಲ್ಲಿ ನೆನಸಿ, ಸಾಬೂನಿನಿಂದ ಒಗೆಯಬೇಕು ಅಥವಾ ಕುದಿಯುವ ನೀರಿನಲ್ಲಿ ಸೋಪಿನ ಪುಡಿ ಕದರಿ ಬಟ್ಟೆಯನ್ನು ಕೆಲವು ಕಾಲ ಅದರಲ್ಲಿ ಮುಳುಗಿಸಿ ಇಡಬೇಕು. ಈ ಕ್ರಮಗಳಿಂದ ಬಟ್ಟೆ ಶುಭ್ರವಾಗುತ್ತದೆ.

ಬಣ್ಣಗಳಲ್ಲಿ ಅನೇಕ ಬಗೆಗಳುಂಟು :

1. ಆಮ್ಲ ಬಣ್ಣಗಳು : ಈ ಬಣ್ಣವನ್ನು ಉಣ್ಣೆ ಹಾಗೂ ರೇಷ್ಮೆ ಬಟ್ಟೆಗಳಿಗೆ ಉಪಯೋಗಿಸಬಹುದು.

2. ಲವಣ ಮೂಲ ಬಣ್ಣ : ಈ ಬಣ್ಣವನ್ನು ಎಲ್ಲಾ ಬಗೆಯ ಬಟ್ಟೆಗಳಿಗೂ ಉಪಯೋಗಿಸಬಹುದು.

3. ನೇರ ಬಣ್ಣಗಳು : ರೇಷ್ಮೆ, ಹತ್ತಿ ಹಾಗೂ ನಾರಿನ ಬಟ್ಟೆಗಳಿಗೆ ಬೇಕಾದ ಪ್ರಮಾಣಕ್ಕೆ ಉಪಯೋಗಿಸ ಬಹುದು.

4. ಗಂಧಕ ಬಣ್ಣಗಳು : ಇದು ನೀರಿನಲ್ಲಿ ಕರಗು ವುದಿಲ್ಲ. ಸೋಡಿಯಂ ಸಲ್ಫೇಟ್‌ನಲ್ಲಿ ಕರಗುತ್ತದೆ. ಇವು ಬಹಳ ಮಂದ. ಈ ಬಣ್ಣವನ್ನು ಹೆಚ್ಚಾಗಿ ಅರಳೆ ಬಟ್ಟೆಗಳಿಗೆ ಉಪಯೋಗಿಸುವರು. ಕಪ್ಪು, ಖಾಕಿ ಹಾಗೂ ನೀಲಿ ಬಣ್ಣಕ್ಕೆ ಬಹಳ ಪ್ರಸಿದ್ಧಿಯಾದುದು.

5. ನೆಫ್ತಾಲ್ ಬಣ್ಣಗಳು : ಈ ಬಣ್ಣವನ್ನು ಕರಗಿ ಸಲು ತೀಕ್ಷ್ಣ ನಾಶಕ ಸೋಡಾ ದ್ರಾವಣವನ್ನು ಉಪಯೋಗಿ

ಸಬೇಕು. ಅರಳೆ ಬಟ್ಟೆಗಳಿಗೆ ಕೆಂಪು, ಕಿತ್ತಲೆ, ಹಳದಿ, ಕಂದು ಚಾಕಲೇಟ್, ಕಡುಗೆಂಪು ಮಧ್ಯಮ ಬಣ್ಣಗಳನ್ನು ತೀವ್ರವಾಗಿ ಕೊಡಲು ಉಪಯೋಗಕಾರಿ.

6. ಬಾನೆ ಬಣ್ಣಗಳು : ಇವು ಬಹಳ ಉಪಯುಕ್ತ ಬಣ್ಣ, ಎಲ್ಲಾ ಬಟ್ಟೆಗಳಿಗೂ ಉಪಯೋಗಿಸಬಹುದು. ಇವು ನೀರಿನಲ್ಲಿ ಕರಗುವುದಿಲ್ಲ, ದಾಹಕ ಸೋಡಾ ಹಾಗೂ ಹೈಡ್ರೋ ಸಲ್ಫೈಟನಲ್ಲಿ ಕರಗುತ್ತವೆ.

7. ರಂಗ ಸ್ಥಾಪಕ ಬಣ್ಣಗಳು : ಇವು ಉತ್ತಮ ಹಾಗೂ ತಾಳಿಕೆಯ ಬಣ್ಣಗಳು. ಉಣ್ಣೆ, ರೇಷ್ಮೆ ಬಟ್ಟೆಗಳಿಗೆ ಉಪಯೋಗಿಸಬಹುದು. ಬಣ್ಣ ಹಾಕುವ ಮೊದಲು ಧಾತ್ವಿಕ ಲವಣಗಳ ಕ್ರಿಯೆಗೆ ಒಳಪಡಿಸಬೇಕು.

8. ಭಸ್ಮದ ಬಣ್ಣಗಳು : ಭಸ್ಮದಿಂದ ತಯಾರಿಸಿದ ಅನಿಲಿನ್ ಬ್ಲಾಕ್ ಅತಿ ಮಹತ್ವವಾದ ಬಣ್ಣ. ಇದು ತಾಳಿಕೆಯಾದದ್ದು, ಬೆಲೆಯೂ ಅಗ್ಗ. ಅರಳೆ ಬಟ್ಟೆಗಳಿಗೆ ಉಪಯೋಗಿಸಬಹುದು.

## ಪ್ರಯೋಗದ ತಂತ್ರ

ಈ ಬಂಧಿತ ಕಲೆಯಲ್ಲಿ ಮೂರು ಬಗೆಗಳುಂಟು:

1. ವೃತ್ತಾಕಾರದ ವಿನ್ಯಾಸ
2. ಗೆರೆಗಳುಳ್ಳ ವಿನ್ಯಾಸ
3. ಒಂದೇ ಬಗೆಯ ಸುಂದರ ವಿನ್ಯಾಸಗಳು

ಇವೇ ಅಲ್ಲದೆ ನವೀನ ಪ್ರಯೋಗದ ವಿನ್ಯಾಸಗಳೂ ಉಂಟು.

**ವೃತ್ತಾಕಾರದ ವಿನ್ಯಾಸವನ್ನು ಪಡೆಯುವ ಕ್ರಮ :**

ಬಟ್ಟೆಯ ಮಧ್ಯ ಭಾಗವನ್ನು ತುದಿಯಾಗಿಟ್ಟುಕೊಂಡು


















ಚಿತ್ರ 7

1. ವೃತ್ತಾಕಾರದ ವಿನ್ಯಾಸ ಪಡೆಯುವ ವಿಧಾನ.
2. ಒಂದೇ ಬಗೆಯ ಸುಂದರ ವಿನ್ಯಾಸಗಳನ್ನು ತೆಗೆಯುವ ವಿಧಾನ.
3. ಬಟ್ಟೆಯನ್ನು ಬೇಕಿರುವ ಅಳತೆಗೆ ಮಡಿಚಿ ಅವುಗಳ ಮೇಲೆ ಮರದ ವಿನ್ಯಾಸದ ತುಂಡುಗಳಿಂದ ಬಂಧಿಸಿ ನವೀನ ವಿನ್ಯಾಸವನ್ನು ಪಡೆಯುವ ಕ್ರಮ.

ರವನ್ನು ಬಿಗಿಯಾಗಿ ಸುತ್ತುತ್ತಾ ಹೋಗಬೇಕು. ದಾರ
ವ ಬಂಧಿಸಿರುವ ಬಟ್ಟೆಯನ್ನು ಸಿದ್ಧಪಡಿಸಿಟ್ಟುಕೊಂಡಿರುವ
ಣ್ಣದ ನೀರಿನಲ್ಲಿ ಮುಳುಗಿಸಬೇಕು.

ರ ಬಣ್ಣ ಹಾಕುವ ಕ್ರಮ

ಐದು ಲೀಟರ್ ನೀರಿಗೆ ಒಂದು ತೊಲ ಬಣ್ಣದ ಪುಡಿ,
ದು ತೊಲ ಸೋಡಿಯಂ ಭಸ್ಮ ಹಾಗೂ ನೀರನ್ನು ಬಣ್ಣದ
ಡಿಯಲ್ಲಿ ಸೇರಿಸಿ ಮಿಶ್ರ ಮಾಡಬೇಕು.

ಕುದಿಯುವ ನೀರನ್ನು ಈ ಮಿಶ್ರಣಕ್ಕೆ ಸೇರಿಸಬೇಕು.
ರಿನಲ್ಲಿ ಬಣ್ಣವನ್ನು ಚೆನ್ನಾಗಿ ಮಿಶ್ರಮಾಡಿ ಸಿದ್ಧಪಡಿಸಿಟ್ಟು
ಂಡಿರುವ ಬಟ್ಟೆಯನ್ನು 30 ನಿಮಿಷಗಳ ಕಾಲ ಮುಳುಗಿಸ
ಕು. ಅನಂತರ ಉಪ್ಪಿನ ನೀರಿನಲ್ಲಿ ಬಣ್ಣದ ಬಟ್ಟೆಯನ್ನು
ತ್ತೆ 30 ನಿಮಿಷಗಳ ಕಾಲ ಮುಳುಗಿಸಿ ಬಣ್ಣವನ್ನು ದೃಢೀ
ಸಬೇಕು. ಇದಾದ ಮೇಲೆ ನೆರಳಿನಲ್ಲಿ ಬಂಧಿಸಿದ ಬಟ್ಟೆ
ಡನೆ ಒಣಗಿಸಬೇಕು. ಬಟ್ಟೆಯು ಒಣಗಿದ ಮೇಲೆ ದಾರ
ನ್ನು ಬಿಚ್ಚಿದಾಗ ವರ್ಣರಂಜಿತ ವೃತ್ತಾಕಾರದ ವಿನ್ಯಾಸ
ಣಿಸಿಕೊಳ್ಳುತ್ತದೆ.

ರೆಗಳ ವಿನ್ಯಾಸ

ಬಟ್ಟೆಯನ್ನು ಗಟ್ಟಿಯಾಗಿ ಸುರುಳಿ ಸುತ್ತಬೇಕು. ಸುರುಳಿ
ಾಡುವಾಗ ಎರಡು ಕಡೆಯಿಂದಲೂ ಸುರುಳಿ ಸುತ್ತಿ ಮಧ್ಯೆ
ರಿಸಬೇಕು ಅಥವಾ ಒಂದೇ ಸುರುಳಿಯಲ್ಲೂ ಸುತ್ತಬಹುದು.

ಈ ಸುರುಳಿಯ ಮೇಲೆ ಬೇಕಿರುವ ಅಳತೆಗೆ ಸ್ಥಳ ಬಿಟ್ಟು
ರವನ್ನು ಗಟ್ಟಿಯಾಗಿ ಸುತ್ತಬೇಕು.

## ನೇರ ಬಣ್ಣ ಹಾಕುವ ಮತ್ತೊಂದು ವಿಧಾನ

ಅವಿಪ್ರಲ್ ಬಣ್ಣವನ್ನು ಉಪಯೋಗಿಸುವ ಕ್ರಮ : ಒಂದು ತೊಲ ಈ ಬಣ್ಣದ ಪುಡಿಯನ್ನು ಸ್ವಲ್ಪ ಬಿಸಿಯಾಗಿರುವ ಐದು ಲೀಟರ್ ನೀರಿನಲ್ಲಿ ಮಿಶ್ರ ಮಾಡಿಕೊಳ್ಳಬೇಕು. ಸಿದ್ಧವಾಗಿರುವ ಬಟ್ಟೆಯನ್ನು ಈ ಬಣ್ಣದ ನೀರಿನಲ್ಲಿ 30 ನಿಮಿಷಗಳ ಕಾಲ ಮುಳುಗಿಸಬೇಕು. ಇದೇ ಬಣ್ಣಕ್ಕೆ ಒಂದು ತೊಲ ಅಡಿಗೆ ಉಪ್ಪನ್ನು ಮಿಶ್ರಮಾಡಿ ಈ ಬಟ್ಟೆಯನ್ನು ಮತ್ತೆ 30 ನಿಮಿಷಗಳ ಕಾಲ ಮುಳುಗಿಸಬೇಕು. ಬಟ್ಟೆಗೆ ಹಾಕಿದ ಬಣ್ಣವನ್ನು ದೃಢೀಕರಿಸಲು ಬೇರೊಂದು ಪಾತ್ರೆಯಲ್ಲಿ ಒಂದು ತೊಲ ಸೋಡಿಯಂ ಕಾರ್ಬೋನೇಟ್ ಪುಡಿಯನ್ನು ಮಿಶ್ರ ಮಾಡಿದ ನೀರಿನಲ್ಲಿ ಪುನಃ ಬಟ್ಟೆಯನ್ನು 30 ನಿಮಿಷಗಳ ಕಾಲ ಮುಳುಗಿಸಿಡಬೇಕು. ಅನಂತರ ಬಟ್ಟೆಯನ್ನು ಒಣಗಿಸಿ ದಾರ ಬಿಚ್ಚಿದಾಗ ಸುಂದರ ಗೆರೆಗಳ ವಿನ್ಯಾಸ ಕಾಣಿಸಿಕೊಳ್ಳುತ್ತದೆ.

## ಒಂದೇ ಬಗೆಯ ಸುಂದರ ವಿನ್ಯಾಸಗಳನ್ನು ಪಡೆಯುವ ಕ್ರಮ

ಬಟ್ಟೆಯ ಮೇಲೆ ಬೇಕಿರುವ ಸ್ಥಳದಲ್ಲಿ ದಾರದಿಂದ ಬಂಧಿಸಿ ಬಣ್ಣಕಟ್ಟುವುದು. ರಾಜಾಸ್ಥಾನದ ಸೀರೆಗಳಿಗೆ ಈ ಕ್ರಮ ಈಗಲೂ ಹೆಸರುವಾಸಿ. ಒಂದೇ ತರಹದ ನಿಗದಿಯಾದ ವಿನ್ಯಾಸಗಳು ಬರುವಂತೆ ಅಲ್ಲಲ್ಲಿ ಬಟ್ಟೆಯನ್ನು ಬಂಧಿಸಿ ಬಟ್ಟೆಯ ಎಲ್ಲಾ ಭಾಗವು ಮುಗಿದ ಮೇಲೆ ಮೇಲೆ ತಿಳಿಸಿರುವ ರೀತಿಯಲ್ಲಿ ಬಣ್ಣದ ನೀರಿನಲ್ಲಿ ಮುಳುಗಿಸಿ ನೆನೆಸಿ ಅನಂತರ ಒಣಗಿಸಿ, ದಾರ ಬಿಚ್ಚಿ

ಗ ಸುಂದರ ವಿನ್ಯಾಸಗಳು ಕಾಣಿಸಿಕೊಳ್ಳುತ್ತವೆ. ಮೇಲೆ
ಸಿರುವ ಈ ಮೂರು ವಿನ್ಯಾಸವು ಜನರಲ್ಲಿ ರೂಢಿಯಲ್ಲಿರುವ
ತಿ.
ಮರದ ಹಲಗೆಯಿಂದ ಬೇಕಿರುವ ವಿನ್ಯಾಸಗಳನ್ನು ಕತ್ತರಿಸಿ
ಪಡಿಸಿಕೊಳ್ಳಬೇಕು. ಮರದ ತುಂಡುಗಳನ್ನು ಕುದಿಯುವ
ಣದಲ್ಲಿ ಒಂದಾವರ್ತಿ ಮುಳುಗಿಸಿ ತೆಗೆಯಬೇಕು. ಇದ
ದ ಸುಂದರ ನವೀನ ವಿನ್ಯಾಸಗಳನ್ನು ಪಡೆಯಬಹುದು.
ಭ್ರವಾಗಿರುವ ಬಟ್ಟೆಯನ್ನು ಬೇಕಿರುವ ಅಳತೆಗೆ ಮಡಿಸಿ,
ಡಿಕೆಯ ಮೇಲೂ ಮತ್ತು ಒಳಭಾಗದಲ್ಲೂ ಮರದ ಒಂದೇ
ನ್ಯಾಸದ ತುಂಡುಗಳನ್ನಿರಿಸಿ ದಾರದಿಂದ ಬಿಗಿಯಾಗಿ ನಾಲ್ಕು
ಗಕ್ಕೂ ಸುತ್ತಬೇಕು. ದಾರದಿಂದ ಬಂಧಿಸಿದ ಈ ಬಟ್ಟೆ
ನ್ನು ಮೇಲೆ ತಿಳಿಸಿರುವ ರೀತಿಯಲ್ಲೇ ಬಣ್ಣದಲ್ಲಿ ಮುಳು
ನೆರಳಲ್ಲಿ ಒಣಗಿಸಿ, ದಾರವನ್ನು ಬಿಚ್ಚಿ ಮಡಿಕೆಗಳನ್ನು
ಸಿದಾಗ ಸುಂದರ ನವ್ಯ ವಿನ್ಯಾಸಗಳು ಗೋಚರವಾಗುತ್ತದೆ.

## ಸೀಸೆಗಳಿಂದ ಸುಲಭ ಶೃಂಗಾರ

ಭಾರತ ಅನೇಕ ಕುಶಲ ಕಲೆಗಳಿಗೆ ಹಿಂದಿನಿಂದಲು
ಪ್ರಖ್ಯಾತಿ ಹೊಂದಿದೆ. ಹೀಗೆ ಪ್ರಸಿದ್ಧವಾದ ಕುಶಲ ಕಲೆಗಳ
ಮುಖ್ಯವಾದ, ನಮ್ಮ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿರು
ಒಂದು ಕಲೆ ಮಡಕೆಗಳನ್ನು ವಿವಿಧ ವರ್ಣಗಳಿಂದ ಅಲಂಕರಿಸಿ
ಚಿತ್ರಗಳನ್ನು ಬರೆಯುವುದು. ಹರಪ್ಪ ಮೊಹೆಂಜೊದಾರೊ
ಸಂಸ್ಕೃತಿಗಳ ಕಾಲವಲ್ಲಿಯೇ ಈ ಬಗೆಯ ಕಲಾಕೃತಿಗಳನ್ನು
ಕಾಣಬಹುದು. ಈಗಲೂ ಮಡಕೆಗಳಿಗೆ ಸುಂದರ ಬಣ್ಣಗಳನ್ನು
ಬಳಿದು ಅವುಗಳ ಮೇಲೆ ನವೀನ ರೀತಿಯ ಚಿತ್ರ ವಿನ್ಯಾಸವನ್ನು
ಮೂಡಿಸಿ ಗೃಹ ಶೃಂಗಾರಕ್ಕೆ ಬಳಸುವುದನ್ನು ಬಂಗಾಳದ
ಕಾಣಬಹುದು. ಕವಿ ರವೀಂದ್ರರ ನಲ್ಮೆಯ ಶಿಶು 'ಶಾಂ
ನಿಕೇತನ' ಇಂಥ ಚಿತ್ರಕಲೆಗೆ ಪ್ರಸಿದ್ಧ. ದಕ್ಷಿಣ ಭಾರತದ
ಇದು ಹೆಚ್ಚು ರೂಢಿಯಲ್ಲಿಲ್ಲವಾದರೂ ಮದುವೆಗಳಲ್ಲಿ, ಕೆ
ಹಬ್ಬದ ದಿನಗಳಲ್ಲಿ ಮಡಕೆಗಳನ್ನು ಸಿಂಗರಿಸುವ ಕ್ರಮ ನೋ
ಬಹುದು. ಈಗ ಮಡಕೆಗಳ ಬಳಕೆ ಹೆಚ್ಚು ಇಲ್ಲವಾಗಿ ಗಾಜಿ
ಕುಂಡಗಳನ್ನು ಅಲಂಕರಿಸುವ ಕಲೆ, ಜನಪ್ರಿಯವಾಗುತ್ತಿ
ಭಾರತದಲ್ಲಿ ಈ ಕಲೆ ಅಷ್ಟಾಗಿ ಬೆಳೆದಿಲ್ಲವಾದರೂ ದೊ
ದೊಡ್ಡ ಪಟ್ಟಣಗಳಲ್ಲಿ ಶ್ರೀಮಂತರ ಮನೆಗಳಲ್ಲಿ ಇದು ವಾಡಿ
ಯಲ್ಲಿದೆ. ಜಪಾನಿನಲ್ಲಂತೂ ಇದು ಬಹು ಜನಪ್ರಿಯ ಕ
ಅಲ್ಲಿನ ಇಕಬೋ ಶಾಲೆಯಲ್ಲಿ ಇದಕ್ಕೆಂದೇ ವಿಶೇಷ ಶಿಕ್ಷ
ತರಗತಿಗಳು ನಡೆಯುತ್ತವೆ. ಪ್ರಪಂಚದ ಎಲ್ಲ ಮೂ
ಗಳಿಂದಲೂ ಶಿಕ್ಷಣ ಪಡೆಯಲು ಅಭ್ಯರ್ಥಿಗಳು ಇಲ್ಲಿ
ಬರುತ್ತಾರೆ.

ನಾವು ಅನುಪಯುಕ್ತವೆಂದು ಎಸೆಯುವ ಸೀಸೆಗಳನ್ನು ವಿವಿಧ ವರ್ಣಗಳಿಂದ ಅಲಂಕರಿಸಿ ಚಿತ್ರ ಬರೆದು ಆಕರ್ಷಕವಾಗುವಂತೆ ಮಾಡಿ, ನಮ್ಮ ಮನೆಗಳನ್ನು ಅಲಂಕರಿಸಬಹುದು. ಈ ಕುಶಲ ಕಲೆಯು ಕಷ್ಟವೇನೂ ಅಲ್ಲ. ಬಹು ಸುಲಭವಾದ, ಎಲ್ಲರೂ ಅನುಸರಿಸಬಹುದಾದ ವಿಧಾನವನ್ನು ಇಲ್ಲಿ ವಿವರಿಸಲಾಗಿದೆ. ಸೀಸೆಗಳಲ್ಲಿ ವಿವಿಧ ಆಕೃತಿಗಳು ಇರುವುದರಿಂದ ಅವನ್ನು ತಕ್ಕ ರೀತಿಯಲ್ಲಿ ಅಲಂಕರಿಸಬೇಕಾಗುತ್ತದೆ. ಇಲ್ಲಿ ಆರು ವಿಧಾನಗಳನ್ನು ಕೊಡಲಾಗಿದೆ.

## ಸೀಸೆಗಳ ಹೊರ ಮೈಮೇಲೆ ಬಣ್ಣದ ಚಿತ್ರ

ಸೀಸೆಯ ಹೊರ ಭಾಗವನ್ನು ಚೆನ್ನಾಗಿ ತೊಳೆದು ಬೇಕಾದ ತೈಲ ವರ್ಣವನ್ನು (ಒಂದೇ ಬಗೆಯ) ಕುಂಚದಿಂದ ಒಂದೇ ಸಮನಾಗಿ ಹರಡುವಂತೆ ಬಳಿಯಬೇಕು. ಬಣ್ಣ ಒಣಗಿದ ಮೇಲೆ ಯಾವುದಾದರೂ ಸುಂದರವಾದ ಚಿತ್ರವನ್ನು ಬರೆದು ಬೇರೆ ತೈಲವರ್ಣಗಳಿಂದ ತುಂಬಬೇಕು. ಮೊದಲು ಉಪಯೋಗಿಸುವ ಬಣ್ಣ ಕಪ್ಪು ಮುಂತಾದ ಗಾಢ ವರ್ಣವಾಗಿದ್ದರೆ ಮೇಲೆ ಬರೆಯುವ ಚಿತ್ರ ತಿಳಿವರ್ಣದ್ದಾಗಿರಬೇಕು.

## ಒಳಮೈಗೆ ವರ್ಣಲೇಪನ

ಬೇಕಾದ ತೈಲವರ್ಣವನ್ನು ಸೀಸೆಯೊಳಕ್ಕೆ ಸುರಿದು ನಿಧಾನವಾಗಿ ಸೀಸೆಯನ್ನು ಸುತ್ತಬೇಕು. ಇದರಿಂದ ಸೀಸೆಯ ಒಳಭಾಗದಲ್ಲೆಲ್ಲಾ ಬಣ್ಣ ಸಮನಾಗಿ ಹರಡಿಕೊಳ್ಳುತ್ತದೆ. ಅನಂತರ ಸೀಸೆಯ ಹೊರ ಭಾಗದಲ್ಲಿ ಬೇಕಾದ ಆಕೃತಿಗಳನ್ನು ಬೇಕಾದ (ಒಳಗಿನ ಬಣ್ಣಕ್ಕೆ ವಿರುದ್ಧವಾದ) ಬಣ್ಣದಿಂದ













ಚಿತ್ರ ೮

1. ಸೀಸೆಗಳ ಮೇಲೆ ಸುಂದರ ವಿನ್ಯಾಸಗಳನ್ನು ಬಿಡಿಸಿರುವುದು
2. ಸೀಸೆಗಳ ಮೇಲೆ ಆಧುನಿಕ ರೀತಿಯಲ್ಲಿ ಚಿತ್ರಿಸುವುದು 3. ಅಂಟಿನ ಮೇಳ್ಗೆ ಕನ್ನಡಿ ಚೂರುಗಳನ್ನು ಜೋಡಿಸಿ ಶೃಂಗರಿಸಿರುವುದು.
4. ಪ್ಲಾಸ್ಟರ್ ಆಫ್ ಪ್ಯಾರಿಸ್ ಹಿಟ್ಟನ್ನು ಸೀಸೆಗಳ ಮೇಲೆ ಉಪಯೋಗಿಸುವ ವಿಧಾನ ಅ) ಒದ್ದೆ ಬಟ್ಟೆ ಸುತ್ತುವುದು ಆ) ಕಲಸಿದ ಹಿಟ್ಟನ್ನು ತುದಿಯಿಂದ ಸುರಿಸುವುದು. ಇ) ತಿಳಿ ಹಿಟ್ಟನ್ನು ಸಿಂಪಡಿಸುವುದು

ಅಲಂಕರಿಸಬೇಕು. ಈ ವಿಧಾನವಲ್ಲಿ ಒಳಗೆ ಹರಡಿರುವ ತೈಲ ವರ್ಣ ಬಣ್ಣಗಳೆಂದು ಕಾಯಬೇಕಾಗಿಲ್ಲವಾದ್ದರಿಂದ ಕಾಲದ ಉಳಿತಾಯವಾಗುತ್ತದೆ.

ಸೀಸೆಗಳ ಮೇಲಿನ ತುದಿಯಿಂದ ಬೇರೆ ಬೇರೆ ಬಣ್ಣಗಳನ್ನು ನಿಧಾನವಾಗಿ ಸುರಿದರೆ ಅವು ಕೆಳಕ್ಕೆ ಹರಿಯುತ್ತಾ ಹೋಗುತ್ತವೆ. ಹೀಗೆ ಹರಿಯುವಾಗ ಅವು ಒಂದಕ್ಕೊಂದು ಕಲಸಿಕೊಂಡು ಚಿತ್ತಾಕರ್ಷಕವಾದ ಆಕೃತಿಗಳು ತಮ್ಮಷ್ಟಕ್ಕೆ ತಾವೇ ಮೂಡುತ್ತವೆ. ಬಣ್ಣವನ್ನು ಸುರಿಯುವಾಗ ಕೆಂಪು, ಅದರೊಂದಿಗೆ ಹಳದಿ, ನೀಲಿ, ಕಪ್ಪು, ಬಿಳಿ ಮುಂತಾದ ಬಣ್ಣಗಳನ್ನು ಉಪಯೋಗಿಸಿದರೆ ನೋಡಲು ರಮ್ಯ. ಬೇಕಿದ್ದರೆ ಕುಂಚದಿಂದ ಅಲ್ಲಲ್ಲಿ ಸೇರಿಸುತ್ತಾ ಹೋಗಬೇಕು. ಈ ವಿಧಾನ ಬಹಳ ಸುಲಭ, ನೋಡಲು ಬಲು ಚೆಂದ.

## ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ

ಸೀಸೆಗಳ ಮೇಲೆ ಪ್ಲಾಸ್ಟರ್ ಆಫ್ ಪ್ಯಾರಿಸ್ ಹಿಟ್ಟನ್ನು ಸುರಿಸಿ ಬೇಕಾದ ಆಕೃತಿಗಳನ್ನು ಪಡಿ ಮೂಡಿಸುವ ವಿಧಾನ ಮತ್ತೂ ಚೆನ್ನ. ಮೊದಲು ಸೀಸೆಯನ್ನು ಒದ್ದೆ ಬಟ್ಟೆಯಿಂದ ಸುತ್ತಬೇಕು. ಅನಂತರ ಪ್ಲಾಸ್ಟರ್ ಆಫ್ ಪ್ಯಾರಿಸ್ ಪುಡಿಯನ್ನು ನೀರಲ್ಲಿ ದೋಸೆ ಹಿಟ್ಟಿನ ಹದಕ್ಕೆ ಕಲಸಿ ಬಟ್ಟೆಯ ಮೇಲೆ ಕೈಯಿಂದ ಸಿಂಪಡಿಸಬೇಕು. ಸೀಸೆಯ ಎಲ್ಲಾ ಭಾಗವನ್ನೂ ಹಿಟ್ಟಿನಿಂದ ತುಂಬಿಸಿ ಗಟ್ಟಿಯಾದ ನಂತರ (ಸುಮಾರು ಐದು ನಿಮಿಷಗಳ ನಂತರ) ಸೀಸೆಯ ಮುಚ್ಚಳದ ಭಾಗದಿಂದ ಮತ್ತೆ ತಿಳಿಪ್ಲಾಸ್ಟರ್ ಆಫ್ ಪ್ಯಾರಿಸ್ ಹಿಟ್ಟನ್ನು ಸುರಿಯಬೇಕು.

ಈ ರೀತಿ ಮೇಲಿಂದ ಸುರಿಯುವುದರಿಂದ ಮಂದವಾದ ಹಿಟ್ಟು ಕೆಳಮುಖವಾಗಿ ಹರಿದು ತನ್ನಷ್ಟಕ್ಕೆ ತಾನೇ ಗಟ್ಟಿಯಾಗುತ್ತದೆ. ಒಂದೆರಡು ದಿನಗಳವರೆಗೆ ಒಣಗಿಸಿ ಅನಂತರ ಜಲವರ್ಣ ಇಲ್ಲವೆ ತೈಲವರ್ಣವನ್ನು ಉಪಯೋಗಿಸಿ ಬಣ್ಣ ಬಳಿಯಬಹುದು. ಪ್ಲಾಸ್ಟರ್ ಆಫ್ ಪ್ಯಾರಿಸ್ ಹಿಟ್ಟನ್ನು ಮೇಲಿಂದ ಮೇಲೆ ಸಿಂಪಡಿಸುತ್ತಾ ಹೋದಾಗ ಚಿತ್ರದಲ್ಲಿ ಕಾಣುವಂತೆ ತನ್ನ ಮೂಲ ರೂಪವನ್ನು ಕಳೆದುಕೊಂಡು ಭೂಗರ್ಭದಲ್ಲಿ ಹುದುಗಿ ಹೋಗಿದ್ದ ಯಾವುದೋ ಲೋಹದ ಪಾತ್ರೆಯಂತೆ ಕಾಣುತ್ತದೆ. ಈ ರೀತಿ ಸಿಂಪಡಿಸಿದ ಸೀಸೆಗಳ ಮೇಲೆ ಅಲ್ಯೂಮಿನಂ ಅಥವಾ ಚಿನ್ನದ ಪುಡಿ ಮಿಶ್ರವಾದ ತೈಲ ವರ್ಣವನ್ನು ಬಳಿದರಂತೂ ಸೀಸೆ ಎಂದೇ ಹೇಳಲಾಗುವುದಿಲ್ಲ.

## ಕನ್ನಡಿ ಚೂರಿನ ಸಿಂಗಾರ

ಸೀಸೆಗೆ ಗಾಜಿನ ಕನ್ನಡಿ ಚೂರುಗಳನ್ನು ಅಂಟುವಂತೆ ಮಾಡಲು ಜಿಂಕ್ ಆಕ್ಸೈಡ್ ಪುಡಿಯನ್ನು ಆಗಸೆ ಎಣ್ಣೆಯಲ್ಲಿ ಸೇರಿಸಿ ಚೆನ್ನಾಗಿ ಮಿಶ್ರಮಾಡಿ ಅಂಟನ್ನು ತಯಾರಿಸಬೇಕು. ಈ ಅಂಟನ್ನು ಮೊದಲು ಸೀಸೆಗಳ ಮೇಲೆ ಒಂದೇ ಸಮನಾಗಿ ಮೆತ್ತಬೇಕು. ಅನಂತರ ಅಂಟಿನ ಮೇಲೆ ಕನ್ನಡಿ ಚೂರುಗಳನ್ನು ಅಂಟಿಸಬೇಕು. ಇನ್ನೊಂದು ಸುಲಭ ವಿಧಾನ ಎಂದರೆ ಫೆವಿಕಾಲ್ ಅಂಟನ್ನು ಕನ್ನಡಿ ಚೂರಿನ ಹಿಂಭಾಗಕ್ಕೆ ಬಳಿದು ಸೀಸೆಗಳ ಮೇಲೆ ಅಂಟಿಸಬಹುದು. ಕನ್ನಡಿ ಚೂರುಗಳಿಂದ ಸೀಸೆಯು ವಿನ್ಯಾಸಕ್ಕೆ ಹೊಂದುವಂತೆ ಅಂಟಿಸಿದ ಮೇಲೆ ಒಂದೆರಡು ದಿನ ಬಿಟ್ಟು ಚೂರುಗಳು ಪರಸ್ಪರ ಸೇರುವ ಭಾಗಕ್ಕೆ ಬಣ್ಣ ಬಳಿಯಬೇಕು.

## ಕೊರೆಯಚ್ಚಿನಿಂದ ( ಸ್ಟೆನ್ಸಿಲ್‌ನಿಂದ) ಚಿತ್ರ

ಕಲಾವಿದರಲ್ಲದವರೂ ಕೂಡ ಸೀಸೆಗಳ ಮೇಲೆ ಸುಲಭ ರೀತಿ ಯಲ್ಲಿ ತಮಗೆ ಇಷ್ಟವಾದ ಚಿತ್ರವನ್ನು ಸ್ಟೆನ್‌ಸಿಲ್ ವಿಧಾನದಿಂದ ಮೂಡಿಸಬಹುದು. ಬೇಕಾದ ಚಿತ್ರವನ್ನು ಇಲ್ಲವೆ ವಿನ್ಯಾಸವನ್ನು ಕಲಾವಿದರಿಂದ ಬರೆಸಿ ಅಥವಾ ಪುಸ್ತಕದಿಂದ ಆಯ್ದುಕೊಂಡು ಹರಿತವಾದ ಬ್ಲೇಡಿನಿಂದ ಆಕೃತಿಗೆ ತಕ್ಕಂತೆ ಕತ್ತರಿಸಿ ತೆಗೆಯ ಬೇಕು. ಕಾಗದದ ಮೇಲೆ ಉಳಿಯುವ ಭಾಗ ಮೂಲ ಚಿತ್ರ ದಂತೆಯೇ ಇದ್ದು ಸ್ಟೆನ್‌ಸಿಲ್ ಎನ್ನಿಸಿಕೊಳುತ್ತದೆ. ಇದಕ್ಕೆ ವಾರ್ನಿಷ್ ಬಳಿದು ಒಣಗಿಸಬೇಕು. ಇಂಥ ಹಾಳೆಯನ್ನು ಸೀಸೆಯ ಮೇಲೆ ಒತ್ತಿಹಿಡಿದು ಕುಂಚದಿಂದಾಗಲೀ, ಬಟ್ಟೆಯಿಂದಾ ಗಲಿ, ಸ್ಪಂಜಿನಿಂದಾಗಲೀ ಬೇಕಾದ ಬಣ್ಣದಿಂದ ತುಂಬಬಹುದು ಅಥವಾ ಕತ್ತರಿಸಿದ ವಿನ್ಯಾಸ ಭಾಗವನ್ನೇ ಸೀಸೆಯ ಮೇಲೆ ಅಂಟಿಸಿ ಸೀಸೆಯ ಉಳಿದ ಭಾಗಕ್ಕೆ ಬಣ್ಣ ಬಳಿಯಬಹುದು. ಒಣಗಿದನಂತರ ಅಂಟಿಸಿರುವ ಕಾಗದವನ್ನು ಬಿಡಿಸಿ ತೆಗೆದುನೋಡಿ ದರೆ ಸುಂದರ ವರ್ಣರಂಜಿತವಾದ ವಿನ್ಯಾಸ ಮೂಡಿರುತ್ತದೆ.

### ಕರಕುಶಲ ಕಲೆಯಲ್ಲಿ ಪರವಲಯದ ರೇಖಾಕೃತಿ

ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಬೆಳೆದು ಬಂದಿರುವ ಕೈ ಕಸುಬು ಕುಶಲ ಕೈಗಾರಿಕೆ. ಈ ಕುಶಲ ಕೈಗಾರಿಕೆ ಹಿಂದೆ ಪ್ರತಿಯೊಂದು ಹಳ್ಳಿಯಲ್ಲೂ ಇತ್ತು. ಭಾರತದ ಕರಕುಶಲ ವಸ್ತುಗಳಿಗೆ ಪ್ರಪಂಚದಾದ್ಯಂತ ಜನರ ಮೆಚ್ಚುಗೆ ಹಾಗೂ ಬೇಡಿಕೆ ಇತ್ತು. ಅಂದು ರಫ್ತಾಗುತ್ತಿದ್ದ ಭಾರತದ ವಸ್ತುಗಳಲ್ಲಿ ಕುಶಲ ಕೈಗಾರಿಕೆಯ ವಸ್ತುಗಳೇ ಹೆಚ್ಚಾಗಿದ್ದವು. ತುಂಬ ನವಿ ರಾದ ಢಾಕಾಮುಸ್ಲಿನ್ ಬಟ್ಟೆ, ಮನೋಹರವಾದ ಕಾಶ್ಮೀರ ಶಾಲು, ಅಂದ ಚಂದದ ರಾಜಾಸ್ತಾನದ ಬೊಂಬೆ ಚಿತ್ರ, ವಿಚಿತ್ರವಾದ

ಲೋಹದ ವಸ್ತು ಹಾಗೂ ಪಾತ್ರೆಗಳು, ದಂತದ ಹಾಗೂ ಗಂಧದ ಸುಂದರವಾದ ಕೆತ್ತನೆಯ ಸಾಮಾನುಗಳಿಗೆ ಮೈಸೂರು, ಸೊರಬ ಹೆಸರುವಾಸಿಯಾಗಿದ್ದವು ಗ್ರಾಮೋದ್ಯೋಗ ಮತ್ತು ಗುಡಿಗಾರಿಕೆ ವ್ಯಕ್ತಿಗಳಿಗೆ ಅನೇಕ ಜೀವನೋಪಾಯಗಳಾಗಿದ್ದವು.

ಆದರೆ ಬ್ರಿಟಿಷ್ನ ಕೈಗಾರಿಕಾ ಕ್ರಾಂತಿಯ ಫಲವಾಗಿ ಭಾರತದಲ್ಲಿ ಆನುವಂಶಿಕವಾಗಿ ಬಂದಿದ್ದ ಗೃಹಕೈಗಾರಿಕೆಗಳು ಹೀನ ಸ್ಥಿತಿಗೆ ಬಂದವು. ಆಂಗ್ಲರ ಆಡಳಿತ ಧೋರಣೆ, ಉತ್ಪಾದನ ವ್ಯವಸ್ಥೆಯಲ್ಲಿ ಯಂತ್ರೋಪಕರಣಗಳ ಬಳಕೆ. ವಿದೇಶಿ ವಸ್ತುಗಳ ಬಗ್ಗೆ ಜನರಿಗಿದ್ದ ವ್ಯಾಮೋಹ ಇವೇ ಮೊದಲಾದ ಅಂಶಗಳು ಭಾರತದಲ್ಲಿ ಕುಶಲ ಕೈಗಾರಿಕೆಯ ಪ್ರಾಮುಖ್ಯವನ್ನು ಕುಂಠಿತಗೊಳಿಸಿದವು. ಕಾರ್ಖಾನೆಗಳ ಸ್ಥಾಪನೆಯಿಂದ ಗೃಹ ಕೈಗಾರಿಕೆಗಳು ಮೂಲೆ ಪಾಲಾದವು. ಇದರಿಂದ ಕುಶಲ ಕರ್ಮಿಗಳು ಪರಾವಲಂಬಿಗಳಾಗಿ ಕೂಲಿ ಮಾಡಿ ಜೀವನೋಪಾಯ ಮಾಡಿಕೊಳ್ಳುವ ಸ್ಥಿತಿಗಿಳಿದರು. ಹೀಗೆ ಭಾರತದ ಕುಶಲ ಕೈಗಾರಿಕೆಗಳು ಕ್ರಮೇಣ ನಶಿಸುತ್ತಾ ಬಂದವು.

ಕುಶಲ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸುವ ಹಲವಾರು ಪ್ರಯತ್ನಗಳು 1947ರ ಹಿಂದೆಯೇ ನಡೆದಿದ್ದವು. ಸ್ವಾತಂತ್ರ್ಯಾನಂತರ ಗ್ರಾಮಗಳ ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಗತಿಯಲ್ಲಿ ಗ್ರಾಮೋದ್ಯೋಗಗಳ ಪ್ರಾಮುಖ್ಯವನ್ನು ಸರ್ಕಾರ ಗಮನಿಸಿತ್ತು. ಪ್ರತಿಯೊಂದು ಗ್ರಾಮದಲ್ಲೂ ತಲತಲಾಂತರದಿಂದ ಬೆಳೆದು ಬಂದ ಕುಶಲ ಕೆಲಸವನ್ನು ಪುನಶ್ಚೇತನಗೊಳಿಸಲು ಹಲವಾರು ಪರಿಹಾರ ಕ್ರಮಗಳೂ ಸಮಗ್ರ ಯೋಜನೆಗಳೂ ಜಾರಿಗೆ ಬಂದವು.

ಕರ ಕೌಶಲವನ್ನು ಧಾರಾಳವಾಗಿಯೂ ಪರಿಣಾಮಕಾರಿಯಾಗಿಯೂ ಬಳಸಿಕೊಳ್ಳಲು ಆಧುನಿಕ ಕೈಗಾರಿಕೋದ್ಯಮದಲ್ಲಿ ಹೆಚ್ಚು ಅವಕಾಶವಿದೆ. ಈ ಕೆಲಸಕ್ಕೆ ಜಾಣ್ಮೆಯುಳ್ಳ ನಮೂನೆ, ಮೋಹಕ ವಿನ್ಯಾಸ, ನಯ ಮತ್ತು ನಾಜೂಕಿನ ಸರಕುಗಳು ಉತ್ಪಾದನೆಯಾಗಬೇಕು.

ಕುಶಲ ಕೈಗಾರಿಕೆಯಲ್ಲಿ ಕಲೆ ಮತ್ತು ತಾಂತ್ರಿಕ ಕೈಚಳಕ ಎರಡೂ ಅವಶ್ಯ, ಪುರಾತನಕಾಲದಿಂದಲೂ ಕುಶಲ ಕಲೆಗಳಲ್ಲಿ ಬಂದಿರುವ ಜಾನಪದ ಕಲೆಯ ಜೊತೆಗೆ ನವ್ಯವಿನ್ಯಾಸದ ಕೆಲವು ಸಂಶೋಧನೆಯಿಂದ ರೂಪುಗೊಂಡ ಕರಕೌಶಲ ವಸ್ತುಗಳಿಗೆ ಬೇಡಿಕೆಯೂ ಹೆಚ್ಚುತ್ತಲೇ ಇವೆ. ಸುಧಾರಿತಗೊಂಡ ಕೆಲವು ಕುಶಲ ಕಲೆಗಳಲ್ಲಿ ರೇಖಾ ಗಣಿತದ (ಜ್ಯಾಮಿತಿ) ಸಹಾಯ ಪಡೆಯಲಾಗಿದೆ. ರೇಖಾ ಗಣಿತದಲ್ಲಿ ಕಂಡು ಬರುವ ಸರಳ ರೇಖೆಗಳು, ವಕ್ರ ರೇಖೆಗಳು, ಕೋನಗಳು, ವೃತ್ತಗಳು ಇವುಗಳ ಆಧಾರದ ಮೇಲೆ ಅನೇಕ ಬಗೆಯ ನವ್ಯ ಕಲಾ ಕೃತಿಗಳ ನಿರ್ಮಾಣ ಸಾಧ್ಯವಾಗಿದೆ.

ಚೆಂಡನ್ನು ಮೇಲಕ್ಕೆ ಎಸೆದಾಗ ಅದು ಒಂದು ನಿರ್ದಿಷ್ಟ ಎತ್ತರಕ್ಕೆ ಹೋಗಿ ಮತ್ತೆ ಕೆಳಗೆ ಬೀಳುವುದನ್ನು ಸಾಮಾನ್ಯವಾಗಿ ಎಲ್ಲರೂ ಗಮನಿಸಿರುತ್ತಾರೆ. ಆದರೆ ಚೆಂಡಿನ ಚಲನ ಪಥ ಒಂದು ನಿರ್ದಿಷ್ಟ ಸಮತಲೀಯ ವಕ್ರ ರೇಖೆಯಲ್ಲೇ ಇರುತ್ತದೆ. ಇದೇ ರೀತಿ ಫಿರಂಗಿ ಗುಂಡನ್ನು ಹಾರಿಸಿದಾಗಲೂ ಗುಂಡಿನ ಚಲನೆಯ ಪಥವೂ ಸಮತಲ ವಕ್ರ ರೇಖೆಯಲ್ಲೇ ಚಲಿಸುವುದು. ಈ ಪಥಕ್ಕೆ "ಪರವಲಯ ಪಥ" ಎಂದು ಹೆಸರು. ಈ ವಿನ್ಯಾಸದ ಪರವಲಯ ರೇಖಾಕೃತಿಯಲ್ಲಿ ಸೇತುವೆಯನ್ನು ನಿರ್ಮಿಸುವುದು

ಸಾಮಾನ್ಯವಾಗಿ ರೂಢಿಯಲ್ಲಿದೆ. ಸೌರ ಕುಡಿಕೆಯ ನಿಮ್ನಗಾಜಿನ ವೃತ್ತವನ್ನು ಪರವಲಯ ರೇಖೆ ಬರುವಂತೆ ಅಳವಡಿಸಿರುವುದ ರಿಂದ ಹೆಚ್ಚಿನ ಉಷ್ಣವನ್ನುಉತ್ಪಾದಿಸಿಕೊಳ್ಳಬಹುದು.ವಿದ್ಯುತ್ ದೀಪದ ಹಿಂಬದಿಯಲ್ಲಿ ಬಳಸುವ ಪ್ರತಿಬಿಂಬಕ ವಿನ್ಯಾಸವೂ ಪರವಲಯದ ಕೃತಿಯೇ. ಇದರಿಂದ ಹೆಚ್ಚು ಹೆಚ್ಚು ಪ್ರಕಾಶ ದೊರಕುವುದು.

**ಸರಳ**

ಪರವಲಯದ ರೇಖಾಕೃತಿಯನ್ನು ಪಡೆಯುವ ವಿಧಾನ ಚಿತ್ರ ದಲ್ಲಿ ತೋರಿಸಲಾಗಿದೆ.

ಎರಡು ಸರಳ ರೇಖೆಗಳು ಎ-ಬಿ ಮತ್ತು ಸಿ-ಬಿ ಒಂದನ್ನೊಂ ದನ್ನು ಸಂಧಿಸಲಿ (ಬಿ ಬಿಂದು). ಈ ಎರಡು ಸರಳ ರೇಖೆಗಳನ್ನು ಸಮ ಅಂತರಗಳಲ್ಲಿ ವಿಭಾಗಿಸಿದೆ ಎಂದಿಟ್ಟುಕೊಳ್ಳೋಣ. ಈ ವಿಭಾಗದ ಬಿಂದುಗಳು1,2,3....ಇತ್ಯಾದಿ ಆಗಿರಲಿ. ಈಗ ಎ-ಬಿ ಸರಳರೇಖೆಯ ಮೇಲಿರುವ 1ನೇ ಬಿಂದುವನ್ನು ಸಿ-ಬಿ ಸರಳ ರೇಖೆಯ 12ನೆಯ ಬಿಂದುವಿಗೆ ಸೇರಿಸಿ. ಹೀಗೆಯೇ ಎ-ಬಿ ಸರಳರೇಖೆಯ 2,3 ಇತ್ಯಾದಿ ಬಿಂದುಗಳನ್ನು ಸಿ-ಬಿ ಸರಳ ರೇಖೆಯ 10, 11 ಇತ್ಯಾದಿ ಬಿಂದುಗಳಿಗೆ ಅನುಕ್ರಮವಾಗಿ ಸೇರಿಸಿದೆ ಎಂದಿಟ್ಟುಕೊಳ್ಳೋಣ. ಆಗ ಈ ಬಿಂದುಗಳನ್ನು ಸೇರಿಸುವ ಬೇರೆ ಬೇರೆ ಸರಳರೇಖೆಗಳು ಒಂದನ್ನೊಂದನ್ನು ಬೇರೆ ಬೇರೆ ಬಿಂದುಗಳಲ್ಲಿ (ಎ,ಬಿ,ಸಿ,ಡಿ, ಇತ್ಯಾದಿ) ಭೇದಿಸು ತ್ತದೆ. ಈ ಬಿಂದುಗಳನ್ನು ಸೇರಿಸಿ ಒಂದು ಗೆರೆ ಎಳೆದರೆ ಆ ಗೆರೆ ಒಂದು ವಿಶಿಷ್ಟ ಆಕಾರವನ್ನು ತಾಳುತ್ತದೆ. ಈ ಆಕಾರಕ್ಕೆ ಪರ ವಲಯ (ಪ್ಯಾರಾಬೊಲ) ಎಂದು ಹೆಸರು.

ಈಗ ಎ-ಬಿ ಮತ್ತು ಸಿ-ಬಿ ಎಂಬ ರೇಖೆಗಳನ್ನು ತೆಳು ಹಲ
...ಯ ಮೇಲೆ ಬರೆದು, ಸಮ ಅಂತರದಲ್ಲಿ ವಿಭಾಗಿಸಿ, ವಿಭಾಗದ
...ಂದುಗಳ ಮೇಲೆ ಮೊಳೆಗಳನ್ನು ಬಡಿಯಬೇಕು. ಎ-ಬಿ ಸರಳ
...ಖೆಯ 1ನೆಯ ಮೊಳೆಗೆ ದಾರವನ್ನು ಕಟ್ಟಿ ಆ ದಾರದ
...ನ್ನೊಂದು ತುದಿಯನ್ನು ಸಿ-ಬಿ ಸರಳರೇಖೆಯ 12ನೆಯ
...ಳೆಗೂ ಸೇರಿಸಬೇಕು. ಇದೇ ರೀತಿ ಎ-ಬಿ ಸರಳರೇಖೆಯ 2,3
...ತ್ಯಾದಿ ಮೊಳೆಗಳನ್ನು ಸಿ-ಬಿ ರೇಖೆಯ 11,10 ಇತ್ಯಾದಿ
...ಳೆಗಳಿಗೆ ಸೇರಿಸುತ್ತಾ ಹೋಗಬೇಕು. ಈ ಎರಡು ಸರಳರೇಖೆ
...ಮಧ್ಯದಲ್ಲಿರುವ ಬೇರೆ ಬೇರೆ ದಾರಗಳು ಬೇರೆ ಬೇರೆ ಬಿಂದು
...ಳಲ್ಲಿ (ಎ,ಬಿ,ಸಿ, ಇತ್ಯಾದಿ) ಒಂದನ್ನೊಂದು ಛೇದಿಸುತ್ತವೆ
... ಛೇದನ ಬಿಂದುಗಳ ಮೇಲೆ ಹಾಯುವ ದಾರಗಳು ಪರವ
...ಯ ಆಕಾರದಲ್ಲಿರುತ್ತವೆ.

## ...ರಕುಶಲ ವಿಧಾನ

ಸಮತಲ ವಕ್ರರೇಖಾಕೃತಿಗಳನ್ನು ಕುಶಲ ಕೈಗಾರಿಕೆಯಲ್ಲಿ
...ಳವಡಿಸಿಕೊಳ್ಳಲು ತೆಳು ಹಲಗೆ (ಮರ, ಹಾರ್ಡ್ ಬೋರ್ಡ್,
...ೈವುಡ್, ಕಾರ್ಡ್‌ಬೋರ್ಡ್) ಅರ್ಧ ಅಂಗುಲ ಎತ್ತರದ
...ಳೆ, ಜಲವರ್ಣ, ಚೌಕಟ್ಟು, ದಾರ (ಹತ್ತಿ, ಪಾಲಿಥಿಲೀನ್
...ಬರ್, ಲೋಹ, ನಾರು), ಬಣ್ಣದ ಬಟ್ಟೆ ಮತ್ತು ಸುತ್ತಿಗೆ ಈ
...ಸ್ತುಗಳು ಬೇಕಾಗುತ್ತವೆ. ಗಮನದಲ್ಲಿಡಬೇಕಾದ ವಿಷಯ
...ಂದರೆ, ಉಪಯೋಗಿಸುವ ಹಿನ್ನೆಲೆಯ ಬಣ್ಣ ಗಾಢವಾಗಿದ್ದರೆ.
...ು ಬಣ್ಣದ ದಾರವನ್ನೂ, ತೆಳು ಬಣ್ಣಕ್ಕೆ ಅಚ್ಚ ಬಣ್ಣದ
...ರವನ್ನೂ ಉಪಯೋಗಿಸಬೇಕು. ಪ್ರಾರಂಭದಲ್ಲಿ ಕೆಲವು ಸರಳ
...ೋನಗಳ ಪರವಲಯಾಕೃತಿಯನ್ನು ರೂಪಿಸುವುದನ್ನು ಅಭ್ಯಾಸ
...ಮಾಡಿಕೊಂಡರೆ ಅನಂತರ ಸಂಮಿಶ್ರದ ಕೃತಿಗಳನ್ನು ಸುಲಭ
...ಾಗಿ ಪಡೆಯಬಹುದು. ಈ ಕೆಲಸಕ್ಕೆ ಲಘುಕೋನ, ಸಮಕೋನ



ಚಿತ್ರ 9

ಕುಗ್ಗಿರುವ ಪರವಲಯಾಕೃತಿಯನ್ನು ಲಘುಕೋನದಲ್ಲೂ, ಸಮನಾಂತರ ಪರವಲಯಾಕೃತಿಯನ್ನು ಲಂಬಕೋನದಲ್ಲೂ ಮತ್ತು ವಿಸ್ತಾರಿತ ಪರವಲಯಾಕೃತಿಯನ್ನು ಗುರುಕೋನದಲ್ಲೂ ರೂಪಿಸಬಹುದು.





ಚಿತ್ರ 10

ಂಮಿಶ್ರಕೋನಗಳ ಜೋಡನೆ. a) ಶಿಲಂಬೆ ಆಕಾರ. b) ತ್ರಿಕೋನ.



ಚಿತ್ರ 11

c) ವಜ್ರಾಕೃತಿ.

ಗುರುಕೋನಗಳು ಸಹಾಯಕಾರಿಯಾಗುತ್ತವೆ. ಇದರಿಂದ ಕುಗ್ಗಿರುವ ಪರವಲಯ ಆಕೃತಿಯನ್ನು ಲಘುಕೋನದಲ್ಲೂ, ಸಮಾನಾಂತರ ಕೃತಿಯನ್ನು ಲಂಬಕೋನದಲ್ಲೂ, ವಿಸ್ತರಿತ ಕೃತಿಗಳನ್ನುಗುರುಕೋನದಲ್ಲೂ ರೂಪಿಸಬಹುದು. ಸಂಮಿಶ್ರಕೋನಗಳ ಜೋಡನೆಯು, ತ್ರಿಕೋನ, ಚತುರಸ್ರ, ಚತುಷ್ಕೋನ, ಆಯತಕೋನ, ವಜ್ರಾಕೃತಿಯ ನೆರವಿನಿಂದ ಸುಂದರ ವಿನ್ಯಾಸಗಳ ಪರವಲಯ ರೇಖಾಕೃತಿಗಳನ್ನು ಬಿಡಿಸಬಹುದು.



ಚಿತ್ರ 12

ಗೋಡೆ ಫಲಕವನ್ನಾಗಿ ಬಳಸಿರುವ ಸಂಮಿಶ್ರ ಪರವಲಯಾಕೃತಿ.

ರೇಖಾಗಣಿತದ ಸಹಾಯದಿಂದಬರುವ ಪರವಲಯಾಕೃತಿಯ ವಿನ್ಯಾಸವನ್ನು, ಹೊಸ ಹೊಸ ನಮೂನೆಗಳ ಆಧಾರದ ಮೇಲೆ, ಬಣ್ಣ ಬಣ್ಣದ ದಾರಗಳನ್ನು ಉಪಯೋಗಿಸಿಕೊಂಡು ಗೋಡೆ ಫಲಕವನ್ನಾಗಿ, ಗೃಹಾಲಂಕಾರದಲ್ಲಿ ಉಪಯೋಗಿಸಿದ್ದೇ ಆದಲ್ಲಿ ಇದೊಂದು ಲಾಭದಾಯಕ ಹವ್ಯಾಸವೇ ಆಗುತ್ತದೆ.

## ಕೆಲವು ಸಾಹಿತ್ಯ ಕೃತಿಗಳು

### ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ಟಿ. ಎನ್. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ಟಿ. ಎಸ್. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣ
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣ
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚೆನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗ್ಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಟಿ. ವಿ. ವೆಂಕಟಾಚಲಶಾಸ್ತ್ರಿ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ